ISBN 81-237-0477-1

1994 (ಶಕ 1915)

ರೂ. 19.00

*The Best Thirteen (Kannada)*

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016
ಇವರಿಂದ ಪ್ರಕಟಿತ



ನೆಹರೂ ಬಾಲ ಪುಸ್ತಕಾಲಯ

# ಹದಿಮೂರು ಶ್ರೇಷ್ಠ ಕಥೆಗಳು

*ಭಾರತದ 13 ಭಾಷೆಗಳ ಶ್ರೇಷ್ಠ ಕಥೆಗಳ ಸಂಕಲನ*

ಚಿತ್ರಗಳು
ಮಿಕ್ಕಿ ಪಟೇಲ್

ಅನುವಾದ
ಎಲ್. ಎಸ್. ಶೇಷಗಿರಿ ರಾವ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



# ಅನುಕ್ರಮಣಿಕೆ

# ವಿಶೇಷ ಬಹುಮಾನ

ಅನಂತ ದೇವ್ ಶರ್ಮ

ಎಂತಹ ಘಟಿಂಗ ಹುಡುಗ! ಬೆತ್ತ ತೆಗೆದುಕೊಂಡು ಚೆನ್ನಾಗಿ ಅವನಿಗೆ ಬಾರಿಸಬೇಕು, ಅದೇ ಸರಿ ಅವನಿಗೆ. ಅವನು ಇತರ ಹುಡುಗರ ಜೊತೆಗೆ ಜಗಳ-ಕದನ ಆಡುವ ವಿಷಯವೂ ನನ್ನ ಕಿವಿಗೆ ಬಿದ್ದಿದೆ. ಬರಲು ಹೇಳಿ ಕಳುಹಿಸಿ ಅವನಿಗೆ. ಮುಖ್ಯೋಪಾಧ್ಯಾಯರು, "ಮೋಹನ್! ಏ ಮೋಹನ್!" ಎಂದು ಚೌಕೀದಾರರನ್ನು ಕೂಗಿದರು. ಮುಖ್ಯೋಪಾಧ್ಯಾಯರು ಗುರುಗುಟ್ಟುವುದನ್ನು ಕೇಳಿಯೇ ಅವರು ತುಂಬಾ ಸಿಟ್ಟಾಗಿದ್ದಾರೆ ಎಂದು ಮೋಹನ ಊಹಿಸಿದ. ಓಡುತ್ತೋಡುತ್ತ ಬಂದು ಹೆದರಿಕೆಯಿಂದಲೇ "ಏನು ಸರ್?" ಎಂದು ಕೇಳಿದ.

"ಬೇಗ ಹೋಗಿ ಐದನೆಯ ತರಗತಿಯಿಂದ ತಪನ್‌ನನ್ನು ಕರೆದುಕೊಂಡು ಬಾ". ಮುಖ್ಯೋಪಾಧ್ಯಾಯರು ಅಪ್ಪಣೆ ಮಾಡಿದರು.

ತಪನ್ ಎನ್ನುವ ಹುಡುಗನ ಪರಿಚಯವನ್ನು ಓದುಗನಿಗೆ ನಾನು ಮಾಡಿಕೊಡಬೇಕು. ಅವನು, ಪದುಮಣಿ ಗ್ರಾಮದ ಗುಮಾಸ್ತೆ ರತನ್‌ನ ಎರಡನೆಯ ಮಗ. ಸ್ವಲ್ಪ ತೆಳ್ಳಗೇ ಇದ್ದರೂ ಅವನು ಬಲಶಾಲಿ, ಸ್ವಲ್ಪ ಕಪ್ಪು ಬಣ್ಣ, ಹೊಳೆಯುವ ಕಣ್ಣುಗಳು. ಓದಿನಲ್ಲೇನೋ ಬುದ್ಧಿವಂತನೆ. ಆದರೆ ಮನೆಯಲ್ಲಿ ಹೊರಗಡೆಯಲ್ಲೂ ಅವನ ತುಂಟತನಕ್ಕೆ ಕೊನೆಯೇ ಇಲ್ಲ. ಯಾವಾಗಲೂ ಏನಾದರೂ ಗಲಾಟೆಗೆ ಸಿಕ್ಕಿರುವವನೇ. ಆದರೂ, ಅವನೇ ಜಗಳವನ್ನು ಪ್ರಾರಂಭಮಾಡಿದ್ದು ಎಂದೂ ಇಲ್ಲ ಎನ್ನುವುದನ್ನು ಒಪ್ಪಿಕೊಳ್ಳಬೇಕು. ಆದರೆ ಯಾರಾದರೂ ಅವನನ್ನು ರೇಗಿಸಿದರೆ ಅವರು ಕೊಟ್ಟದ್ದನ್ನು ತಿರುಗಿಸಿ ಕೊಡದೆ ಬಿಡುವವನಲ್ಲ, ತನ್ನ ವಯಸ್ಸಿನ ಹುಡುಗರ ಗುಂಪಿಗೆ ಅವನೇ ನಾಯಕ, ಅವರ ಪರವಾಗಿ ಕೈ ಎತ್ತಲು ಸದಾ ಅವನು ಸಿದ್ಧ. ಅವನ ಜೊತೆಯವರಿಗೆಲ್ಲ ಅವನಲ್ಲಿ ಪ್ರೀತಿ, ಗೌರವ.

ಹಳ್ಳಿಯಲ್ಲಿ ಪ್ರಾಥಮಿಕ ಶಾಲೆಯಲ್ಲಿ ಓದು ಮುಗಿಸಿ ತಪನ್ ಹದಿನೈದು ಮೈಲಿ ದೂರದ ಒಂದು ಹೈಸ್ಕೂಲಿಗೆ ಒಂದು ವರ್ಷ ಹೋಗಿದ್ದ. ಚಿಕ್ಕಪ್ಪನ ಮನೆಯಲ್ಲಿದ್ದ. ಈಗ ಮತ್ತೆ ಮನೆಗೆ ಬಂದು, ಅವನ ಹಳ್ಳಿಯಿಂದ ಒಂದೂವರೆ ಮೈಲಿ ದೂರವಿದ್ದ ಜ್ಞಾನಪೀಠ ಹೈಸ್ಕೂಲಿನಲ್ಲಿ ಓದುತ್ತಿದ್ದಾನೆ.

ಅವನು ಜ್ಞಾನಪೀಠ ಹೈಸ್ಕೂಲಿಗೆ ಬಂದು ಇನ್ನೂ ಒಂದೇ ತಿಂಗಳಾಗಿತ್ತು. ಆಗಲೇ ಅವನ ಮೇಲೆ ದೂರಿತ್ತು. ಪದುಮಣಿ ಹಳ್ಳಿಯ ವ್ಯಾಪಾರಿ ಹರೇನ್, ತಪನ್ ಮತ್ತು ಇನ್ನು ಕೆಲವರು ಹುಡುಗರು ಪ್ರಚೋದನೆಯೇ ಇಲ್ಲದೆ ಹಿಂದಿನ ದಿನ ಸಂಜೆ ತನ್ನ ಅಂಗಡಿಯ ಮೇಲೆ ಕಲ್ಲುಗಳನ್ನು ಎಸೆದರು, ತಪನ್ ಈ ಪಟಿಂಗರ ಮುಖಂಡನಾಗಿದ್ದ ಎಂದು ದೂರುಕೊಟ್ಟಿದ್ದ.

ತಪನ್ ಚೌಕೀದಾರನ ಜೊತೆಗೆ ಬಂದ, ಹೆದರಿಕೆಯಿಂದ ಮುಖ್ಯೋಪಾಧ್ಯಾಯರ ಕಡೆ ಕಣ್ಣು ಹೊರಳಿಸಿ ತಲೆಬಗ್ಗಿಸಿ ನಿಂತ. ತಮ್ಮ ಬೆತ್ತವನ್ನು ಆಡಿಸುತ್ತ ಮುಖ್ಯೋಪಾಧ್ಯಾಯರು ಕೇಳಿದರು, "ನೀನೇ ತಪನ್, ಅಲ್ಲವೇ?"

"ಹೌದು ಸರ್" ತಪನ್ ಮರ್ಯಾದೆಯಿಂದ ಉತ್ತರಕೊಟ್ಟ.

ಅಂಗಡಿಯವನ ಕಡೆ ಬೆರಳು ತೋರಿಸುತ್ತ ಮುಖ್ಯೋಪಾಧ್ಯಾಯರು, "ನಿನಗೆ ಇವರು ಗೊತ್ತೇ?" ಎಂದು ಕೇಳಿದರು.

"ಗೊತ್ತು ಸರ್. ಅವರು ನಮ್ಮ ಹಳ್ಳಿಯಲ್ಲಿ ಇದ್ದಾರೆ."

"ಸರಿ. ನೀನೂ ನಿನ್ನ ಸ್ನೇಹಿತರೂ ನಿನ್ನೆ ಸಂಜೆ ಅವರ ಅಂಗಡಿಯ ಮೇಲೆ ಕಲ್ಲು ಹೊಡೆದಿರಿ

ಎನ್ನುವುದು ನಿಜವೇ? ನಿಜ ಹೇಳು, ಇಲ್ಲದಿದ್ದರೆ ಬೆನ್ನಿನ ಚರ್ಮ ಸುಲಿಯುವ ಹಾಗೆ ಬಾರಿಸುತ್ತೇನೆ."

"ನಿಜ ಸರ್. ರತನ್ ಮತ್ತು ಇತರರ ಜೊತೆಗೆ ನಾನು ಕಲ್ಲುಹೊಡೆದದ್ದು ನಿಜ".

"ಯಾಕೆ? ಯಾಕೆ ಹಾಗೆ ಮಾಡಿದೆ ನೀಚ? ಉತ್ತರ ಕೊಡು". ಮುಖ್ಯೋಪಾಧ್ಯಾಯರು ಗುಡುಗಿದರು.

"ಸರ್, ಈ ಮನುಷ್ಯ ಮೋಸಮಾಡುತ್ತಾರೆ. ಹೆಚ್ಚಿಗೆ ಬೆಲೆ ತೆಗೆದುಕೊಳ್ಳುತ್ತಾರೆ. ಸಾಮಾನು ಕಡಿಮೆ ಕೊಡುತ್ತಾರೆ. ಅಲ್ಲದೆ, ಅವರು ಹೊಸ ರೀತಿಯ ಕಾಗದದ ಚೀಲವೊಂದನ್ನು ಉಪಯೋಗಿಸುವುದಕ್ಕೆ ಪ್ರಾರಂಭಿಸಿದ್ದಾರೆ, ಅದಕ್ಕೆ ಕೆಳಭಾಗದಲ್ಲಿ ಮೆತ್ತಗಿನ ಪಟ್ಟಿ ಇದೆ. ನಿನ್ನೆ ನಾವು ಅವರ ಅಂಗಡಿಯಲ್ಲಿ ಒಂದು ಕಿಲೊ ಬೇಳೆ ಕೊಂಡುಕೊಂಡೆವು; ಮನೆಗೆ ಹೋಗಿ ತೂಕ ಮಾಡಿದರೆ ಎಂಟುನೂರೇ ಗ್ರಾಮ್ ಇತ್ತು. ಚೀಲದೊಳಗಿನ ಮೆತ್ತಗಿನ ತಟ್ಟೆ ಐವತ್ತು ಗ್ರಾಮ್ ತೂಕ. ಒಂದು ನೂರ ಐವತ್ತು ಗ್ರಾಮ್ ಕಡಮೆ ತೂಕ ತೂಗಿದ್ದರು. ಇದು ಹಳ್ಳಿಯಲ್ಲಿ ಎಲ್ಲರಿಗೂ ಗೊತ್ತು. ನಾನು ನಿನ್ನೆ ಅವರ ಅಂಗಡಿಗೆ ಹೋಗಿ ಕೇಳಿದರೆ ಬಯ್ದು ಅಂಗಡಿಯಿಂದ ಓಡಿಸಿಬಿಟ್ಟರು. ಅದಕ್ಕೋಸ್ಕರವೇ ನಾನೂ ಇತರ ಹುಡುಗರೂ ಅವರ ಅಂಗಡಿಗೆ ಕಲ್ಲುಗಳನ್ನು ಎಸೆದೆವು."

ಮುಖ್ಯೋಪಾಧ್ಯಾಯರು ಅಂಗಡಿಯವನ ಕಡೆ ನೋಡಿದರು, ಅವನ ಮುಖ ಕೆಂಪಗಾಗಿ ಹೋಗಿತ್ತು.

ಮುಖ್ಯೋಪಾಧ್ಯಾಯರು ಸ್ವಲ್ಪ ಹೊತ್ತು ಯೋಚನೆ ಮಾಡಿದರು. ಅನಂತರ ತಪನ್ ಕಡೆ ತಿರುಗಿ, "ಆದರೂ, ನೀನು ಮಾಡಿದ್ದು ಸರಿಯಲ್ಲ. ಇತರರ ಆಸ್ತಿಗೆ ನಷ್ಟ ಮಾಡೋದು ತಪ್ಪು. ವ್ಯಾಪಾರಿ ಮೋಸ ಮಾಡಿದರೆ ಅದನ್ನ ಸರ್ಕಾರ ಅಥವಾ ಗ್ರಾಮ ಪಂಚಾಯತಿಯವರು ವಿಚಾರಿಸಿಕೊಳ್ಳಬೇಕು. ಅದಕ್ಕೂ ನಿನಗೂ ಸಂಬಂಧವಿಲ್ಲ, ಕೈ ಹಿಡಿ!" ಎಂದರು. ತಪನ್‌ಗೆ ಬೆತ್ತದಿಂದ ಐದು ಏಟುಗಳು ಬಿದ್ದವು. ಅವನು ತರಗತಿಗೆ ಹಿಂದಿರುಗಿದಾಗ ಇತರ ಹುಡುಗರು ಕಣ್ಣಂಚಿನಿಂದ ಅವನನ್ನ ನೋಡಿ ಮುಸು ಮುಸು ನಕ್ಕರು.

ಕೆಲವು ದಿನಗಳ ನಂತರ ಇನ್ನೊಂದು ಘಟನೆ ನಡೆಯಿತು. ಆ ಪ್ರದೇಶದಲ್ಲೆಲ್ಲ ಗಾಬರಿ ಹುಟ್ಟಿಸುತ್ತಿದ್ದ ಒಂದು ಎತ್ತಿಗೆ ಸಂಬಂಧಿಸಿದ್ದು ಅದು. ಅನೇಕರಿಗೆ ರಕ್ತ ಬರುವ ಹಾಗೆ ಅದು ತಿವಿದಿತ್ತು. ಯಾರಾದರೂ ದೊಣ್ಣೆ ಹಿಡಿದು ಅದರ ಹತ್ತಿರ ಹೋದರೆ ಸಾಕು ಮೈಮೇಲೆ ಹಾಯುತ್ತಿತ್ತು. ಅದನ್ನು ಕಂಡರೆ ಎಲ್ಲರಿಗೂ ಹೆದರಿಕೆ.

ಈ ಪ್ರಾಣಿಯ ಅಹಂಕಾರ ತಪನ್‌ನ ಕೆಚ್ಚನ್ನ ಕೆಣಕಿತು. "ತಾಳು ತಾಳು, ಗೋಳಾಡಿಸೋ ದುಷ್ಟ! ನಾನು ನಿನ್ನ ಪಳಗಿಸುತ್ತೇನೆ" ಎಂದು ಮೆಲುದನಿಯಲ್ಲಿ ಹೇಳಿಕೊಂಡ. ಶಾಲೆಯಲ್ಲಿ ಮಧ್ಯೆ ಬಿಡುವು ಕೊಟ್ಟಾಗ ಒಂದು ದೊಣ್ಣೆ ಮತ್ತು ಒಂದು ಹಗ್ಗವನ್ನು ತೆಗೆದುಕೊಂಡು ನಿಧಾನವಾಗಿ ಅದರ ಹತ್ತಿರ ಹೋದ. ಸರಿಯಾದ ಅವಕಾಶ ನೋಡಿಕೊಂಡು ಅದರ ಮೇಲು ಹಾರಿದ, ಕುದುರೆಗೆ ಲಗಾಮು ಹಾಕುವ ಹಾಗೆ ಅದರ ಬಾಯಿಗೆ ಹಗ್ಗ ಸೇರಿಸಿ ಬಿಟ್ಟ. ಎತ್ತು ಚಕಿತಗೊಂಡಿತು. ಅದರ ಬೆನ್ನಮೇಲೆ ಭಾರವಿದ್ದದ್ದು ಗೊತ್ತಾದ ಕ್ಷಣವೇ ನೆಲವನ್ನು ಒದ್ದು ಬಗ್ಗಲಾರಂಭಮಾಡಿತು. ತನ್ನನ್ನ ಗೋಳಾಡಿಸುವ ಮನುಷ್ಯನನ್ನು ಕೆಳಕ್ಕೆ ಬೀಳಿಸಬಹುದೆಂಬ ಆಸೆಯಿಂದ ನಾಗಾಲೋಟ ಪ್ರಾರಂಭಿಸಿತು. ಇಷ್ಟು ಹೊತ್ತಿಗೆ ಶಾಲೆಯ ಬಿಡುವು ಮುಗಿದುಹೋಯಿತು. ತರಗತಿ ಮತ್ತೆ ಪ್ರಾರಂಭವಾಯಿತು, ಆದರೆ ತಪನ್ ಎತ್ತನ್ನು ಪಳಗಿಸುವುದರಲ್ಲೆ ತನ್ಮಯನಾಗಿದ್ದ. ಹಗ್ಗವನ್ನು ಬಿಗಿಯಾಗಿ ಹಿಡಿದುಕೊಂಡು, ಮೈಯನ್ನು ಎತ್ತಿಹಾಕುತ್ತ , ಬಾಗುತ್ತಿದ್ದ ಎತ್ತಿನ ಬೆನ್ನಿನ ಮೇಲೆ ಭದ್ರವಾಗಿ ಕುಳಿತೇ ಇದ್ದ. ಎತ್ತಿನ ಬೆನ್ನನ್ನು ಸವರಿದ. ಇದರಿಂದ ಎತ್ತಿಗೆ ಇನ್ನೂ ರೇಗಿತು. ಅದು ಶಾಲೆಯ ಕಾಂಪೌಂಡಿನೊಳಕ್ಕೆ ರಭಸದಿಂದ ನುಗ್ಗಿತು. ಅಲ್ಲಿಂದ ಏಳನೆಯ ತರಗತಿಯೊಳಕ್ಕೆ ನುಗ್ಗಿತು. ಉಪಾಧ್ಯಾಯರೂ ವಿದ್ಯಾರ್ಥಿಗಳೂ ಕಲ್ಲಿನಂತಾಗಿ ಬಿಟ್ಟರು. ಅನಂತರ ಒಬ್ಬರನೊಬ್ಬರು ನೂಕುತ್ತ ತರಗತಿಯಿಂದ ಹೊರಕ್ಕೆ ಹೋಗಲು ದಿಕ್ಕುಪಾಲಾದರು. ನೂಕುನುಗ್ಗಲಲ್ಲಿ ಅನೇಕರು ಮುಗ್ಗರಿಸಿ ಬಿದ್ದುಬಿಟ್ಟರು. ಉಪಾಧ್ಯಾಯ ರಜನಿ ಸಹಾರಿಯ ಹೊರಕ್ಕೆ ಓಡಿ ಗಾಯವಾಗದಂತೆ ತಪ್ಪಿಸಿಕೊಂಡರು. ಹುಚ್ಚಾಪಟ್ಟೆ ಕುಣಿಯುತ್ತಿದ್ದ ಪ್ರಾಣಿಯ ಕೊಂಬುಗಳಿಂದ ಹಲವು ಕಿಟಕಿಗಳ ಗಾಜುಗಳು ಚೂರಾಗಿಬಿಟ್ಟವು. ಕಟ್ಟಕಡೆಗೆ ದಿಕ್ಕುಗಾಣದ ಎತ್ತು ಅರಚುತ್ತ ಶಾಲೆಯ ಮೈದಾನಕ್ಕೆ ಓಡಿ ಒಂದು ಪಕ್ಕಕ್ಕೆ ಬಿದ್ದುಕೊಂಡಿತು. ಕೆಲವು ಕ್ಷಣಗಳ ನಂತರ ಅದು ಎದ್ದು, ಜೀವ ಉಳಿಸಿಕೊಳ್ಳುವುದಕ್ಕೋಸ್ಕರ ನಾಗಾಲೋಟ ಓಡಿತು. ಹಿಂದಕ್ಕೆ ಒಂದು ಬಾರಿಯೂ ತಿರುಗಿನೋಡಲಿಲ್ಲ.

ತಪನ್ ಮೇಲೆ ಮತ್ತೊಂದು ದೂರು ದಾಖಲಾಯಿತು; ಈ ಬಾರಿ ದೂರು ಕೊಟ್ಟವರು ಉಪಾಧ್ಯಾಯ ರಜನಿ ಸಹಾರಿಯ. ಮುಖ್ಯೋಪಾಧ್ಯಾಯರು ಕೆಂಡಕೆಂಡವಾದರು. ಈ ಹುಡುಗ ಒಂದು ಪೀಡೆ, ಮಹಾ ತೊಂದರೆ ಕೊಡುವವನು ಎನ್ನಿಸಿತು. ಹುಡುಗರಿಗೆ ಕಷ್ಟವಾದದ್ದು ಮಾತ್ರವಲ್ಲ, ಶಾಲೆಯ ಕಟ್ಟಡಕ್ಕೂ ಜಖಂ ಆಗಿತ್ತು. ಮುಖ್ಯೋಪಾಧ್ಯಾಯರು ಮತ್ತೆ ತಪನ್‌ನನ್ನು ಕರೆಸಿದರು.

ತಪನ್ ಚೌಕೀದಾರ ಮೋಹನನೊಂದಿಗೆ ಬಂದ. ಅವನನ್ನು ನೋಡಿ ಮುಖ್ಯೋಪಾಧ್ಯಾಯರ ಕೋಪ ಕುದಿಯಿತು.

ಕೋಪದಿಂದ ಮುಖ್ಯೋಪಾಧ್ಯಾಯರು, "ನೀನೊಬ್ಬ ದುಷ್ಟ ಹುಡುಗ! ಎತ್ತನ್ನ ತರಗತಿಯೊಳಕ್ಕೆ ಯಾಕೆ ಕರೆದುಕೊಂಡು ಬಂದೆ? ಗಟ್ಟಿಯಾಗಿ ಮಾತನಾಡು" ಎಂದು ಗದರಿಸಿದರು.

ತಲೆಯನ್ನು ತಗ್ಗಿಸಿಕೊಂಡು ತಪನ್, "ಸರ್, ನಾನು ಎತ್ತನ್ನ ತರಗತಿಯೊಳಕ್ಕೆ ಕರೆದುಕೊಂಡು ಬರಲಿಲ್ಲ, ಅದನ್ನ ಪಳಗಿಸೋದಕ್ಕೋಸ್ಕರ ನಾನು ಅದರ ಬೆನ್ನಮೇಲೆ ಸವಾರಿ ಮಾಡುತ್ತಿದ್ದೆ. ಅದು ಇದ್ದಕ್ಕಿದ್ದ ಹಾಗೇ ಕೊಠಡಿಯೊಳಕ್ಕೆ ನುಗ್ಗಿಬಿಟ್ಟಿತು" ಎಂದು ಉತ್ತರಕೊಟ್ಟ.

"ಶಾಲೆ ನಡೆಯುವ ಹೊತ್ತಿನಲ್ಲಿ ಎತ್ತಿನಸವಾರಿ ಮಾಡೋದಕ್ಕೆ ನಿನಗೆ ಯಾರು ಹೇಳಿದರು? ಹಿಡಿ ಕೈಯನ್ನ".

ಮುಖ್ಯೋಪಾಧ್ಯಾಯರ ಬೆತ್ತದ ಹದಿನೈದು ಏಟುಗಳನ್ನು ತಪನ್ ತಿನ್ನಬೇಕಾಯಿತು. ಮತ್ತೆ ಅವನ ತರಗತಿಯ ಹುಡುಗರೆಲ್ಲ ಮುಸಮುಸ ನಕ್ಕರು, ಅವನನ್ನ ಗೇಲಿ ಮಾಡಿದರು. ಶಾಲೆಯ ಕೆಟ್ಟಹುಡುಗ ಎಂದು ಅವನಿಗೆ ಹೆಸರಾಯಿತು.

ಕೆಲವೇ ದಿನಗಳಲ್ಲಿ ಶಾಲೆಯಲ್ಲಿ ಒಂದು ತಿಳಿವಳಿಕೆ ಪತ್ರವನ್ನು ತರಗತಿಗಳಲ್ಲಿ ಓದಿದರು. ಅದರಲ್ಲಿ ಹೀಗಿತ್ತು: ಐದನೆಯ ತರಗತಿಯ ತಪನ್ ಏಳನೆಯ ತರಗತಿಯೊಳಕ್ಕೆ ಎತ್ತೊಂದನ್ನು ಸವಾರಿಮಾಡಿಕೊಂಡು ಬಂದು ಉಪಾಧ್ಯಾಯರಿಗೂ ವಿದ್ಯಾರ್ಥಿಗಳಿಗೂ ಗೊಂದಲ ಮಾಡಿದ್ದಕ್ಕೆ ಮತ್ತು ಗಾಜನ್ನು ಒಡೆದದ್ದಕ್ಕೆ ಬೆತ್ತದಿಂದ ಹದಿನೈದು ಏಟಿನ ಶಿಕ್ಷೆಯಾಗಿದೆ. ನಷ್ಟವನ್ನು ಕಟ್ಟಿಕೊಡಲು 25 ರೂಪಾಯಿಗಳ ಜುಲ್ಮಾನೆಯನ್ನೂ ವಿಧಿಸಿದೆ. ಕಡೆಯಲ್ಲಿ ತಿಳಿವಳಿಕೆ ಪತ್ರದಲ್ಲಿ, ತಪನ್ ಮತ್ತೆ ಇಂತಹ ತಪ್ಪು ಮಾಡಿದರೆ ಅವನನ್ನು ಶಾಲೆಯಿಂದ ಹೊರಗೆ ಹಾಕುವುದಾಗಿ ಹೇಳಿತ್ತು. ಉಗುಳುವ ನೆಪದಿಂದ ತಮ್ಮ ತರಗತಿಗಳಿಂದ ಹೊರಕ್ಕೆ ಬಂದ ಕೆಲವೇ ಹುಡುಗರು ಅವನನ್ನ ಅಣಕಿಸಿದರು.

ಅವತ್ತೇ ಸಂಜೆ ಮುಖ್ಯೋಪಾಧ್ಯಾಯರು ಮನೆಗೆ ಬಂದು, ಟೀ ಕುಡಿದು, ಅಡ್ಡಾಡಲು ಹೊರಟಿದ್ದರು. ಇದು ಅವರ ನಿತ್ಯದ ರೂಢಿ. ಅವರು ಹಿಂದಕ್ಕೆ ಬರುತ್ತಿದ್ದಾಗ ಕತ್ತಲಾಗುತ್ತಿತ್ತು. ಆಗ ಶಾಲೆಯ ಕೆಟ್ಟಹುಡುಗ ಅವರ ಕಣ್ಣಿಗೆ ಬಿದ್ದ. ತಪನ್ ಒಬ್ಬ ಮುದುಕ ಭಿಕ್ಷುಕಿಯ ಕೈ ಹಿಡಿದುಕೊಂಡು ನಡೆಸುತ್ತಿದ್ದ, ಅವನ ತಲೆಯ ಮೇಲೆ ಅವಳ ಭಿಕ್ಷಾಟನೆಯ ಬುಟ್ಟಿ ಇತ್ತು. ಪಕ್ಕದಲ್ಲೆ ಅವನ ತರಗತಿಯ ಇಬ್ಬರು ಹುಡುಗರು ಅವನನ್ನು ಲೇವಡಿಮಾಡುತ್ತ ಹೆಜ್ಜೆಹಾಕುತ್ತಿದ್ದರು. ಮುಂದೆ ನರೇನ್, ಹಿಂದೆ ಮಹೇಶ್. ಮುದುಕಿಗೆ ಜ್ವರ ಕಾಯುತ್ತಿತ್ತು. ಭಿಕ್ಷೆ ಬೇಡುತ್ತಿರುವಾಗ ಅವಳಿಗೆ ಜ್ವರ ಬಂದಿತ್ತು. ಅವಳು ಬುಟ್ಟಿಯನ್ನು ಹೊತ್ತುಕೊಂಡು ಓಡಾಡುವುದಿರಲಿ, ನಡೆಯುವುದೇ ಅವಳಿಗೆ ಕಷ್ಟವಾಗಿತ್ತು. ಅವಳ ಅವಸ್ಥೆಯನ್ನು ನೋಡಿ ತಪನ್ ಅವಳ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು, ಅವಳ ಕೈ ಹಿಡಿದುಕೊಂಡು, "ಅಜ್ಜಿ, ನನ್ನ ಕೈ ಹಿಡಿದುಕೊ. ನಾನು ನಿನ್ನನ್ನ ಮನೆಗೆ ಸೇರಿಸುತ್ತೇನೆ" ಎಂದಿದ್ದ.

ನರೇನ್ ಮತ್ತು ಮಹೇಶ್ ಮುಖ್ಯೋಪಾಧ್ಯಾಯರನ್ನು ಕಂಡು ನಮಸ್ಕಾರ ಮಾಡಿದರು. ಮುಖ್ಯೋಪಾಧ್ಯಾಯರೇ ತಪನ್‌ನ ಒಂದು ಕೆಟ್ಟಕೆಲಸವನ್ನು ಕಣ್ಣಾರೆ ನೋಡುತ್ತಿದ್ದಾರೆ ಎಂದು ಖುಷಿಯಾಗಿ ತಿರಸ್ಕಾರದಿಂದ ತಪನ್ ಕಡೆ ನೋಡಿದರು. ಮುಖ್ಯೋಪಾಧ್ಯಾಯರು ಪ್ರಶ್ನಿಸಿದಾಗ ಮುದುಕಿಯು ತಪನ್ ಅವಳಿಗೆ ಸಹಾಯ ಮಾಡಲು ತಾನೇ ಮುಂದಕ್ಕೆ ಬಂದುದನ್ನು ಹೇಳಿದಳು. ಅವಳ ಧ್ವನಿ ನಡುಗುತ್ತಿತ್ತು. ತಪನ್ ಕಡೆ ತೋರಿಸಿ ಅವಳು, "ಈ ಪ್ರೀತಿಯ ಹುಡುಗ ಅಲ್ಲಿ ಇಲ್ಲದೆ ಹೋಗಿದ್ದರೆ ನಾನಿನ್ನೂ ರಸ್ತೆಯಲ್ಲಿ ಬಿದ್ದಿರುತ್ತಿದ್ದೆ. ದೇವರು

ಅವನಿಗೆ ಎಲ್ಲ ರೀತಿಯಲ್ಲಿ ಒಳ್ಳೆಯದನ್ನು ಮಾಡಲಿ. ಈ ಇಬ್ಬರು ಹುಡುಗರೂ ನನಗೆ ಎಷ್ಟು ಕಾಯಿಲೆ ಆಗಿದೆ ಅನ್ನುವುದನ್ನು ನೋಡಿದರು. ಆದರೆ ನನಗೆ ಸಹಾಯ ಮಾಡುವುದಿರಲಿ, ಈ ಮುದ್ದು ಹುಡುಗನನ್ನ ಗೇಲಿ ಮಾಡುತ್ತಿದ್ದಾರೆ. ಅಂತಃಕರಣವೇ ಇಲ್ಲ ಅವರಿಗೆ, ಎಂದಳು. ಮುದುಕಿಗೆ ಉಸಿರಾಡುವುದೇ ಕಷ್ಟವಾಯಿತು. ಮುಖ್ಯೋಪಾಧ್ಯಾಯರು ನರೇನನ್ನೂ ಮಹೇಶನನ್ನೂ ಗದರಿಸಿ ಕಳುಹಿಸಿದರು. ಮುದುಕಿಯನ್ನು ಅವಳ ಮನೆಗೆ ಕರೆದುಕೊಂಡುಹೋಗುವ ಹಾಗೆ ತಪನ್‌ಗೆ ಹೇಳಿದರು.

ಎರಡು ವಾರಗಳ ನಂತರ ಒಂದು ದಿನ ಮುಖ್ಯೋಪಾಧ್ಯಾಯರು ಸುತ್ತಾಟ ಮುಗಿಸಿಕೊಂಡು ಮನೆಗೆ ಹಿಂದಿರುಗುತ್ತಿದ್ದರು. ರಸ್ತೆಯಲ್ಲಿ ಆ ಎತ್ತೇ ಕಾಲು ಮುರಿದುಕೊಂಡು ಮಲಗಿತ್ತು. ಪಕ್ಕದಲ್ಲಿ ತಪನ್ ಮೊಣಕಾಲೂರಿ ಕುಳಿತುಕೊಂಡು ಗಾಯವಾದ ಅದರ ಕಾಲಿಗೆ ಔಷಧ ಉಜ್ಜುತ್ತ ಬ್ಯಾಂಡೇಜ್ ಕಟ್ಟುತ್ತಿದ್ದ. ಅವನ ಕಣ್ಣುಗಳಲ್ಲಿ ನೀರಿತ್ತು. ಮುಖ್ಯೋಪಾಧ್ಯಾಯರು ಅವನ ಹತ್ತಿರವೇ ಬಂದು ನಿಂತಾಗ ಅವನು ಬೆಚ್ಚಿಬಿದ್ದ. ಕೈ ಜೋಡಿಸಿ ಮುಖ್ಯೋಪಾಧ್ಯಾಯರಿಗೆ ನಮಸ್ಕರಿಸಿದ. "ಇಲ್ಲೇನು ಮಾಡುತ್ತಿರುವಿ, ತಪನ್?" ಮುಖ್ಯೋಪಾಧ್ಯಾಯರು ಕೇಳಿದರು.

"ಸರ್ ಯಾರೋ ಕೆಟ್ಟ ಹುಡುಗರು ಎತ್ತಿನ ಕಾಲನ್ನು ಮುರಿದುಬಿಟ್ಟಿದ್ದಾರೆ. ಅದು ತುಂಬ ನೋವನ್ನ ಅನುಭವಿಸುತ್ತಿದೆ. ಸರ್, ಮೂಕಪ್ರಾಣಿಗಳನ್ನು ನೋಯಿಸೋದು ತಪ್ಪಲ್ಲವೆ?" ವಿಷಾದದಿಂದ ತಪನ್ ಪ್ರಶ್ನಿಸಿದ.

"ಇದು ಕೆಟ್ಟ ಪ್ರಾಣಿ, ಪಳಗಿಸಬೇಕು ಅಂತ ಹೇಳಿ ನೀನು ಅವತ್ತು ಇದೇ ಎತ್ತನ್ನ ಸವಾರಿಮಾಡಿದೆ, ಅಲ್ಲವೆ? ನಿನ್ನ ಕಣ್ಣಿನಲ್ಲಿ ಅದೇ ಇಷತ್ತು ಇಷ್ಟೊಂದು ಒಳ್ಳೆಯದಾದದ್ದು ಹೇಗೆ?"

"ಸರ್, ಇದು ಬಹಳ ಕೆಟ್ಟಪ್ರಾಣಿಯೇ ಆಗಿತ್ತು. ಆದರೆ ನಾನು ಅದನ್ನ ಸವಾರಿಮಾಡಿದ ದಿನದಿಂದ ತಿದ್ದಿಕೊಂಡಿದೆ. ಜನರಿಗೆ ಹಾಯುವುದಿಲ್ಲ ಅಷ್ಟೇ ಅಲ್ಲ, ಅವರಿಗೆ ದಾರಿ ಬಿಡುತ್ತೆ. ಆದ್ದರಿಂದ ಅವರು ಅದಕ್ಕೆ ಕೇಡಕು ಮಾಡಬಾರದಾಗಿತ್ತು. ಅದು ಯಾತನೆ ಪಡ್ತಾ ಇದೆ. ನಾನು ಕೆಲವು ಔಷಧದ ಎಲೆಗಳನ್ನು ಅರೆದು ಆ ಮೆದುಪದಾರ್ಥವನ್ನ ಇದರ ಕಾಲಿಗೆ ಕಟ್ಟಿದ್ದೇನೆ. ಗಾಯಗಳಿಗೆ ಇದು ಬಹಳ ಒಳ್ಳೆಯದು ಅಂತ ನಮ್ಮ ತಂದೆ ಹೇಳುವುದನ್ನು ಕೇಳಿದ್ದೇನೆ, ಸರ್," ತಪನ್ ಹೇಳಿದ. ಎತ್ತಿಗಾಗಿ ಅವನ ಹೃದಯದಲ್ಲಿ ಅನುಕಂಪ ತುಂಬಿತ್ತು, ಕಣ್ಣಿನ ತುಂಬ ನೀರು.

ಮುಖ್ಯೋಪಾಧ್ಯಾಯರು ಯೋಚನೆಯಲ್ಲಿ ಮುಳುಗಿದರು. ಅನಂತರ ತಪನ್ ಮುಖ ನೋಡಿ ಪ್ರೀತಿಯಿಂದ ಅವನ ಬೆನ್ನನ್ನು ತಟ್ಟಿದರು. ಒಂದು ಮಾತನ್ನೂ ಆಡದೆ ಮನೆಯ ಕಡೆ ಹೊರಟರು. ಅವರ ಕಣ್ಣುಗಳು ಒದ್ದೆಯಾಗಿದ್ದವು.

ಜ್ಞಾನಪೀಠ ಪ್ರೌಢಶಾಲೆಯಲ್ಲಿ ಬಹುಮಾನ ವಿತರಣೆಯ ದಿನ. ಗೌಹಾತಿಯ ಒಂದು ಕಾಲೇಜಿನ ಪ್ರಿನ್ಸಿಪಾಲರನ್ನು ಸಮಾರಂಭದ ಅಧ್ಯಕ್ಷತೆ ವಹಿಸಲು ಆಹ್ವಾನಿಸಿದ್ದರು. ಈ ಬಾರಿ ಪ್ರಿನ್ಸಿಪಾಲ್ ರಾಬಿನ್ ಬರುವಾ ಅವರು ಅತ್ಯುತ್ತಮ ಸ್ವಭಾವದ ಹುಡುಗನಿಗೆ ವಿಶೇಷ ಬಹುಮಾನವೊಂದನ್ನು ಕೊಡಲು ನಿರ್ಧರಿಸಿದ್ದರು. ಮೂವರ ಜೀವನಚರಿತ್ರೆಗಳನ್ನು - ಮಹಾತ್ಮಾ ಗಾಂಧಿ, ಜವಾಹರಲಾಲ್ ನೆಹ್ರು ಮತ್ತು ಲಾಲ್ ಬಹದೂರ್ ಶಾಸ್ತ್ರಿ ಇವರ ಜೀವನ ಚರಿತ್ರೆಗಳನ್ನು - ಬಹುಮಾನವಾಗಿ ಕೊಡಲಿದ್ದರು.

ತರಗತಿಗಳ ಕೊಠಡಿಯಲ್ಲಿ ವಿದ್ಯಾರ್ಥಿಗಳು ವಿಶೇಷ ಬಹುಮಾನದ ವಿಷಯವನ್ನು ಚರ್ಚಿಸುತ್ತಿದ್ದರು. ಐದನೆಯ ತರಗತಿಯಲ್ಲಿ ನತೀನ್ ಅಪಹಾಸ್ಯದಿಂದ ನಕ್ಕು ತನ್ನ ಪಕ್ಕದಲ್ಲಿ ಕುಳಿತಿದ್ದ ಭಾಬೇಶನಿಗೆ, "ನಿನಗೆ ಗೊತ್ತ ಭಾಬೇಶ್, ಅತ್ಯುತ್ತಮ ಸ್ವಭಾವದ ಬಹುಮಾನವನ್ನು ತಪನ್‌ಗೆ ಕೊಡ್ತಾರೆ?" ಎಂದು ಗಟ್ಟಿಯಾಗಿ ಹೇಳಿದ. ಹುಡುಗರು ಬಿದ್ದು ಬಿದ್ದು ನಕ್ಕರು. ಅಪಮಾನದಿಂದ, ನಾಚಿಕೆಯಿಂದ ತಪನ್‌ನ ಮುಖ ಕೆಂಪಾಯಿತು. ಭೂಮಿ ನನ್ನನ್ನ ನುಂಗಿಬಿಡಬಾರದೆ ಎಂದು ಅವನಿಗೆ ಅನ್ನಿಸಿತು.

ಸಮಾರಂಭ ಪ್ರಾರಂಭವಾಯಿತು. ಅಧ್ಯಕ್ಷರನ್ನು ಸ್ವಾಗತಿಸಿದ ನಂತರ ಕಾರ್ಯದರ್ಶಿಯ ವರದಿಯನ್ನು ಓದಿದರು. ಇದರ ನಂತರ ಹುಡುಗರಿಂದ ಹಾಡುಗಳು, ನೃತ್ಯಗಳು ಮತ್ತು ಕಂಠಪಾಠಗಳ ಕಾರ್ಯಕ್ರಮ.

ಆಮೇಲೆ ಅಧ್ಯಕ್ಷರು ಭಾಷಣ ಮಾಡಿದರು. ಇನ್ನು ಕೆಲವರು ಮಾತನಾಡಿದರು. ಅನಂತರವೇ ಬಹುಮಾನ ವಿತರಣೆ. ಬಹುಮಾನ ಬಂದವರ ಮುಖ ಸಂತೋಷ, ಹೆಮ್ಮೆಗಳಿಂದ ಬೆಳಗಿತು. ಆಮೇಲೆ, ವಿಶೇಷ ಬಹುಮಾನದ ಘೋಷಣೆ. ಎಲ್ಲರೂ ಕುತೂಹಲದಿಂದ ಕಾಯುತ್ತಿದ್ದರು. ಸಭೆಯನ್ನು ಉದ್ದೇಶಿಸಿ ಮುಖ್ಯೋಪಾಧ್ಯಾಯರು, "ಮಾನ್ಯ ಅಧ್ಯಕ್ಷರೇ, ಗೌರವಾನ್ವಿತ ಮಹಿಳೆಯರೇ, ಮಹನೀಯರೇ, ಅತ್ಯುತ್ತಮ ಸ್ವಭಾವದ ಬಹುಮಾನವನ್ನು ಐದನೆಯ ತರಗತಿಯ ಶ್ರೀಮಾನ್ ತಪನ್ ಹಜಾರಿಕಾಗೆ ಕೊಡಲು ನಿರ್ಧರಿಸಿದೆ" ಎಂದು ಘೋಷಿಸಿದರು.

ಉಪಾಧ್ಯಾಯರುಗಳು, ವಿದ್ಯಾರ್ಥಿಗಳು ಎಲ್ಲರೂ ಆಶ್ಚರ್ಯದಿಂದ ಮೂಕಾದರು. ನರೇನ್ ಮತ್ತು ಭಾಬೇಶ್‌ರ ಮುಖಗಳನ್ನು ನೋಡಬೇಕಾಗಿತ್ತು. ತಪನ್‌ಗೆ ತನ್ನ ಕಿವಿಗಳನ್ನೆ ನಂಬಲಾಗಲಿಲ್ಲ. ಮುಖ್ಯೋಪಾಧ್ಯಾಯರು ಮತ್ತೆ ಹೇಳಿದರು, "ತಪನ್ ಕುಮಾರ್ ಹಜಾರಿಕ, ಐದನೆಯ ತರಗತಿ". ಅವನ ತಲೆ ಗಿರ್ರನೆ ಸುತ್ತಿತು. ನಿಜವೆ ಇದು? ಶಾಲೆಯ ಕೆಟ್ಟ ಹುಡುಗ ಎಂದು ಪ್ರಸಿದ್ಧನಾಗಿದ್ದ ತನ್ನನ್ನ ಅತ್ಯುತ್ತಮ ಸ್ವಭಾವದ ಹುಡುಗನೆಂದು ಬಹುಮಾನ ತೆಗೆದುಕೊಳ್ಳಲು ಕರೆಯುತ್ತಿದ್ದಾರೆಯೆ? ತಪನ್ ಎದ್ದು ನಿಂತ, ಅಧ್ಯಕ್ಷರ ಬಳಿಗೆ ಹೋದ, ನಮಸ್ಕಾರ ಮಾಡಿ ಬಹುಮಾನವನ್ನು ತೆಗೆದುಕೊಂಡ.

ಅನಂತರ ಮುಖ್ಯೋಪಾಧ್ಯಾಯರು ತಪನ್ ಹೇಗೆ ಮುದುಕಿ ಭಿಕ್ಷುಕಿಗೆ ಸಹಾಯ ಮಾಡಿದ ಮತ್ತು ಗಾಯವಾಗಿದ್ದ ಎತ್ತಿಗೆ ಶುಶ್ರೂಷೆ ಮಾಡಿದ ಎಂದು ವಿವರಿಸಿದರು. ಚಪ್ಪಾಳೆಯ ಶಬ್ದ ಮಂದಿರವನ್ನು ತುಂಬಿಬಿಟ್ಟಿತು.

ತಪನ್‌ನ ಕಣ್ಣುಗಳು ಆನಂದದ ಭಾಷ್ಪಗಳಿಂದ ಹೊಳೆಯುತ್ತಿದ್ದವು.

# ಹಸಿದ ಸೆಪ್ಟೋಪಸ್

ಸತ್ಯಜಿತ್ ರೇ

ಮತ್ತೆ ಬಾಗಿಲಿನ ಕರೆಗಂಟೆ ಶಬ್ದವಾದಾಗ ನನಗೆ ಅರಿವಿಲ್ಲದೆ ಬೇಸರದ ಶಬ್ದ ಮಾಡಿದೆ. ಮಧ್ಯಾಹ್ನದಿಂದ ಇದು ನಾಲ್ಕನೆಯ ಬಾರಿ. ಹೀಗಾದರೆ ಕೆಲಸ ಮಾಡುವುದು ಹೇಗೆ? ಕಾರ್ತೀಕನೂ ಪೇಟೆಗೆ ಹೋಗಬೇಕೆಂದು ನೆಪ ಹೇಳಿ ಅನುಕೂಲವಾಗಿ ಮಾಯವಾಗಿಬಿಟ್ಟಿದ್ದ.

ನಾನು ಬರೆಯುವುದನ್ನು ನಿಲ್ಲಿಸಬೇಕಾಯಿತು. ಎದ್ದು ಬಾಗಿಲನ್ನು ತೆರೆದಾಗ ಕಂಠಿ ಬಾಬುವನ್ನು ನೋಡುತ್ತೇನೆ ಎಂದುಕೊಂಡಿರಲಿಲ್ಲ.

"ಎಂತಹ ಆಶ್ಚರ್ಯ!" ನಾನಂದೆ. "ಒಳಕ್ಕೆ ಬನ್ನಿ, ಒಳಕ್ಕೆ ಬನ್ನಿ".

"ನಿಮಗೆ ನನ್ನ ಗುರುತು ಸಿಕ್ಕಿತೇ?"

"ಸಿಕ್ಕದೆ ಹೋಗುವುದರಲ್ಲಿತ್ತು".

ಅವರನ್ನು ಒಳಕ್ಕೆ ಕರೆದುಕೊಂಡು ಬಂದೆ. ನಿಜವಾಗಿಯೂ, ಹತ್ತು ವರ್ಷಗಳಲ್ಲಿ ಅವರ ಸ್ವರೂಪ ಬಹಳ ಬದಲಾಯಿಸಿಹೋಗಿತ್ತು. ಸಾವಿರದ ಒಂಭೈನೂರ ಐವತ್ತರಲ್ಲಿ ಈ ಮನುಷ್ಯ ಭೂತಗನ್ನಡಿ ಹಿಡಿದುಕೊಂಡು ಆಸ್ಸಾಮಿನ ಕಾಡುಗಳಲ್ಲಿ ಕುಪ್ಪಳಿಸುತ್ತಿದ್ದ ಎಂದರೆ ಈಗ ಯಾರು ನಂಬುತ್ತಾರೆ? ಆತನನ್ನ ನಾನು ಅಲ್ಲಿ ನೋಡಿದಾಗ ಅವರಿಗೆ ಹತ್ತಿರ ಹತ್ತಿರ ಐವತ್ತು ವರ್ಷ, ಆದರೆ ಒಂದೇ ಒಂದು ಬಿಳಿಯ ಕೂದಲು ಇರಲಿಲ್ಲ. ಆ ವಯಸ್ಸಿನಲ್ಲಿ ಅವರ ಉತ್ಸಾಹ ಮತ್ತು ಚೈತನ್ಯಗಳನ್ನು ಕಂಡು ತರುಣನೂ ನಾಚಿಕೊಳ್ಳಬೇಕು, ಹಾಗಿದ್ದರು.

"ಸೀತಾಳೆ ಗೆಡ್ಡೆಯಲ್ಲಿ ನಿಮ್ಮ ಆಸಕ್ತಿ ಇನ್ನೂ ಉಳಿಸಿಕೊಂಡಿದ್ದೀರಿ ಅನ್ನೋದು ಕಾಣಿಸುತ್ತಿದೆ" ಎಂದರು ಆತ.

ನನ್ನ ಕಿಟಕಿಯಲ್ಲಿ ಒಂದು ಪಾಟ್‌ನಲ್ಲಿ ಸೀತಾಳೆ ಗೆಡ್ಡೆ ಇದ್ದದ್ದು ನಿಜ; ಅದು ಅನೇಕ ವರ್ಷಗಳ ಹಿಂದೆ ಕಂಠಿಬಾಬು ಕೊಟ್ಟಿದ್ದ ಉಡುಗೊರೆ, ಆದರೆ ನಾನು ಆಸಕ್ತಿಯನ್ನು ಉಳಿಸಿಕೊಂಡಿದ್ದೆ ಎನ್ನುವುದು ತಪ್ಪಾಗುತ್ತದೆ. ಆತ ಗಿಡಗಳ ಬಗ್ಗೆ ನನ್ನ ಕುತೂಹಲವನ್ನು ಪ್ರಚೋದಿಸಿದ್ದ. ಆದರೆ ಆತನು ದೇಶವನ್ನು ಬಿಟ್ಟಮೇಲೆ, ನನ್ನ ಇತರ ಅನೇಕ ಹವ್ಯಾಸಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡಂತೆ ಸೀತಾಳೆಗೆಡ್ಡೆಗಳಲ್ಲೂ ನಿಧಾನವಾಗಿ ಆಸಕ್ತಿಯನ್ನು ಕಳೆದುಕೊಂಡೆ. ಈಗ ನನ್ನ ಆಸಕ್ತಿ ಇರುವುದು ಬರವಣಿಗೆಯಲ್ಲಿ ಮಾತ್ರ. ಕಾಲ ಬದಲಾಗಿದೆ. ಬರವಣಿಗೆಯಿಂದಲೇ ಜೀವನ ನಡೆಸುವುದು ಈಗ ಸಾಧ್ಯ. ನನ್ನ ಮೂರು ಪುಸ್ತಕಗಳಿಂದ ಸ್ವಲ್ಪ ಹೆಚ್ಚು ಕಡಿಮೆ ಈಗ. ನನ್ನ ಜೀವನ ನಡೆಯುತ್ತಿದೆ. ಕಚೇರಿಯಲ್ಲಿ ನನ್ನ ಕೆಲಸವೂ ಇದೆ. ಆದರೆ, ಆ ಕೆಲಸವನ್ನು ಬಿಟ್ಟು ಆಗಾಗ ಪ್ರಯಾಣಕ್ಕೆ ಒಂದಿಷ್ಟು ಕಾಲ ಬಿಟ್ಟರೆ ನನ್ನ ಸಮಯವನ್ನೆಲ್ಲ ಬರವಣಿಗೆಗೆ ವಿನಿಯೋಗಿಸುವ ದಿನಗಳನ್ನು ಎದುರುನೋಡುತ್ತಿದ್ದೇನೆ.

ಕುಳಿತುಕೊಳ್ಳುವಾಗ ಕಂಠಿಬಾಬು ಸ್ವಲ್ಪ ನಡುಗಿದರು.

"ಚಳಿಯಾಗುತ್ತಿದೆಯೇನು?" ನಾನು ಕೇಳಿದೆ. "ಕಿಟಕಿಯನ್ನು ಮುಚ್ಚಿಬಿಡುತ್ತೇನೆ. ಈ ವರ್ಷ ಕಲ್ಕತ್ತದಲ್ಲಿ ಚಳಿಗಾಲ..."

"ಇಲ್ಲ ಇಲ್ಲ", ಆತ ನನ್ನ ಮಾತನ್ನು ತಡೆದರು. "ಒಮ್ಮೊಮ್ಮೆ ಹೀಗೆ ಮೈ ನಡಗುತ್ತದೆ. ವಯಸ್ಸಾಗುತ್ತ ಬಂತುನೋಡಿ, ನರಗಳ ದೌರ್ಬಲ್ಯ"

ನಾನು ಅವರನ್ನು ಎಷ್ಟೋ ವಿಷಯಗಳನ್ನು ಕುರಿತು ಪ್ರಶ್ನೆ ಕೇಳಬೇಕಾಗಿತ್ತು. ಕಾರ್ತಿಕ್ ಹಿಂದಿರುಗಿದ್ದ. ಒಂದಿಷ್ಟು ಚಹ ಮಾಡುವಂತೆ ಅವನಿಗೆ ಹೇಳಿದೆ.

"ನಾನು ಹೆಚ್ಚು ಹೊತ್ತು ಇರುವುದಿಲ್ಲ", ಕಂಠಿ ಎಂದರು. "ಆಕಸ್ಮಾತ್ತಾಗಿ ನಿಮ್ಮ ಒಂದು ಕಾದಂಬರಿಯನ್ನ ನೋಡಿದೆ. ನಿಮ್ಮ ಪ್ರಕಾಶಕರು ನಿಮ್ಮ ವಿಳಾಸವನ್ನು ಕೊಟ್ಟರು. ನಾನು ಒಂದು ಉದ್ದೇಶವನ್ನಿಟ್ಟುಕೊಂಡೇ ಬಂದಿದ್ದೇನೆ ಎನ್ನುವುದನ್ನು ನಿಮಗೆ ಹೇಳಬೇಕು."

"ನಾನು ನಿಮಗಾಗಿ ಏನು ಮಾಡಬಹುದು ಹೇಳಿ. ಆದರೆ ಮೊದಲು ಇದನ್ನು ಹೇಳಿ. ಯಾವಾಗ ಹಿಂದಕ್ಕೆ ಬಂದಿರಿ? ಎಲ್ಲಿ ಹೋಗಿದ್ದಿರಿ? ಈಗ ಎಲ್ಲಿದ್ದೀರಿ? ನಾನು ತಿಳಿದುಕೊಳ್ಳಬೇಕಾದದ್ದು ಬಹಳ ಇದೆ."

"ನಾನು ಎರಡು ವರ್ಷಗಳ ಹಿಂದೆ ಬಂದೆ. ಅಮೆರಿಕದಲ್ಲಿದ್ದೆ. ಈಗ ಬಾರಸಾತಿನಲ್ಲಿದ್ದೇನೆ."

"ಬಾರಸಾತಿನಲ್ಲೆ?"

"ಅಲ್ಲಿ ಒಂದು ಮನೆಯನ್ನು ಕೊಂಡುಕೊಂಡಿದ್ದೇನೆ."

"ತೋಟ ಇದೆಯೇನು?"

"ಹೌದು"

"ಗಿಡಗಳಿಗೆ ಗಾಜಿನ ಮನೆ ಇದೆಯೇನು?"

ಕಂಠಿಬಾಬುವಿನ ಹಿಂದಿನ ಮನೆಯಲ್ಲಿ ಅವರ ಅಪರೂಪದ ಗಿಡಗಳಿಗಾಗಿ ಒಂದು ಸೊಗಸಾದ ಗಾಜಿನ ಮನೆಯಿತ್ತು. ಅವರದು ಅಸಾಧಾರಣ ಗಿಡಗಳ ಅದ್ಭುತ ಸಂಗ್ರಹ! ಸೀತಾಳೆ ಗೆಡ್ಡೆಗಳದೇ ಅರವತ್ತು ಅರವತ್ತೈದು ಬಗೆಯ ಗಿಡಗಳಿದ್ದವು. ಹೂವುಗಳನ್ನು ನೋಡುತ್ತಲೇ ಒಂದು ಇಡೀ ದಿನವನ್ನು ಸುಲಭವಾಗಿ ಕಳೆಯುವುದು ಸಾಧ್ಯವಿತ್ತು.

ಉತ್ತರ ಕೊಡುವುದಕ್ಕೆ ಮೊದಲು ಕಂಠಿಬಾಬು ಸ್ವಲ್ಪಹೊತ್ತು ಸುಮ್ಮನಿದ್ದರು.

"ಹೌದು, ಗಾಜಿನ ಮನೆಯಿದೆ."

"ಅಂದರೆ ನಿಮಗೆ ಹತ್ತುವರ್ಷಗಳ ಹಿಂದೆ ಸಸ್ಯಗಳಲ್ಲಿ ಎಷ್ಟು ಆಸಕ್ತಿಯಿತ್ತೊ ಅಷ್ಟೇ ಆಸಕ್ತಿ ಈಗಲೂ ಇದೆ ಎಂದಾಯಿತು."

"ಹೌದು"

ಅವರು ಕೊಠಡಿಯ ಉತ್ತರದ ಗೋಡೆಯ ಕಡೆಗೆ ದಿಟ್ಟಿಸಿ ನೋಡುತ್ತಿದ್ದರು. ನಾನು ಅದೇ ದಿಕ್ಕಿನಲ್ಲಿ ನೋಡಿದೆ; ಅಲ್ಲಿ ಒಂದು ಭರ್ಜರಿ ಪಟ್ಟೆ ಹುಲಿಯ ಚರ್ಮವನ್ನು ತಲೆಯ ಸಹಿತ ನೇತುಹಾಕಿತ್ತು.

"ನಿಮಗೆ ಅದರ ಗುರುತು ಸಿಕ್ಕಿತೆ?" ನಾನು ಕೇಳಿದೆ.

"ಅದೇ ಅಲ್ಲವೆ ಇದು?"

"ಹೌದು, ಕಿವಿಯ ಹತ್ತಿರ ತೂತು ಕಾಣುತ್ತದಲ್ಲವೆ?"

"ನೀವು ಸೊಗಸಾದ ಗುರಿಗಾರರಾಗಿದ್ದಿರಿ. ಈಗಲೂ ಅಷ್ಟೇ ಚೆನ್ನಾಗಿ ಗುರಿ ಇಡುತ್ತೀರೇನು?"

"ನನಗೆ ಗೊತ್ತಿಲ್ಲ. ಈಚೆಗೆ ಪರೀಕ್ಷೆ ಮಾಡಿ ನೋಡಿಲ್ಲ. ಬೇಟೆಯಾಡುವುದನ್ನು ಸುಮಾರು ಏಳು ವರ್ಷಗಳ ಕೆಳಗೆ ಬಿಟ್ಟುಬಿಟ್ಟೆ."

"ಯಾಕೆ"?

"ಬೇಟೆಯಾಡಿದ್ದು ಸಾಕಾಗಿತ್ತು. ನನಗೆ ವಯಸ್ಸು ಆಯಿತು, ನಿಮಗೆ ಗೊತ್ತಲ್ಲ. ಪ್ರಾಣಿಗಳನ್ನು ಕೊಲ್ಲಬೇಕು ಅಂತ ಈಗ ಅನ್ನಿಸುವುದಿಲ್ಲ."

"ಸಸ್ಯಾಹಾರಿಗಳಾಗಿ ಬಿಟ್ಟಿರೇನು?"

"ಇಲ್ಲ."

"ಹಾಗಾದರೆ ಪ್ರಯೋಜನವೇನು? ಬಂದೂಕು ಹಾರಿಸುವುದೆಂದರೆ ಕೊಲ್ಲುವುದೇ. ಒಂದು ಹುಲಿಯನ್ನೊ ಮೊಸಳೆಯನ್ನೊ ಕಾಡುಕೋಣವನ್ನೊ ಕೊಲ್ಲುತ್ತೀರಿ. ನಿಮ್ಮ ಮನೆಯ ಗೋಡೆಯನ್ನು ಅಲಂಕರಿಸುವುದಕ್ಕೆ ಚರ್ಮವನ್ನು ತೆಗೆದುಕೊಳ್ಳುತ್ತೀರಿ ಅಥವಾ ಭರ್ತಿ ತುಂಬಿಸಿ ತಲೆಯನ್ನಿಡುತ್ತೀರಿ ಇಲ್ಲವೆ ಕೊಂಬುಗಳನ್ನು

ಪ್ರದರ್ಶಿಸುತ್ತೀರಿ. ನೀವು ಬೇಟೆಯಾಡಿದ ಪ್ರಾಣಿಗಳನ್ನು ನೋಡಿದಾಗ ಕೆಲವರು ನಿಮ್ಮನ್ನು ಮೆಚ್ಚಿಕೊಳ್ಳುತ್ತಾರೆ, ಕೆಲವರು ನಡಗುತ್ತಾರೆ. ನಿಮಗೆ ಅವು ನಿಮ್ಮ ಸಾಹಸಮಯ ಯೌವನವನ್ನು ನೆನಪಿಗೆ ತರುತ್ತವೆ. ಆದರೆ ಮೇಕೆಯನ್ನೊ ಕೋಳಿಮರಿಯನ್ನೊ ತಿಂದಾಗ ಏನಾಗುತ್ತದೆ? ನೀವು ಅವನ್ನು ಕೊಲ್ಲುವುದಷ್ಟೇ ಅಲ್ಲ, ಅಗಿದು ಜೀರ್ಣಿಸಿಕೊಳ್ಳುತ್ತೀರಿ. ಯಾವ ರೀತಿಯಲ್ಲಾದರೂ ಅದು ಉತ್ತಮವೇನು?"

ಉತ್ತರವಾಗಿ ನಾನು ಏನೂ ಹೇಳುವಂತಿರಲಿಲ್ಲ, ಕಾರ್ತೀಕ್ ಚಹ ತಂದ. ಕಂಠಿಬಾಬು ಸ್ವಲ್ಪ ಹೊತ್ತು ಸುಮ್ಮನಿದ್ದರು. ಚಹ ಕಪ್ಪು ಕೈಯಲ್ಲಿ ತೆಗೆದುಕೊಳ್ಳುವ ಮೊದಲು ಮತ್ತೆ ನಡುಗಿದರು. ಒಂದು ಗುಟುಕು ಕುಡಿದು, "ಒಂದು ಪ್ರಾಣಿ ಇನ್ನೊಂದು ಪ್ರಾಣಿಯನ್ನು ತಿನ್ನಬೇಕು, ಅದೇ ಮತ್ತೊಂದು ಪ್ರಾಣಿಗೆ ಆಹಾರ ಆಗಬೇಕು ಎನ್ನುವುದು ನಿಸರ್ಗದ ಒಂದು ಮೂಲ ನಿಯಮ. ಅಲ್ಲಿ ತಾಳ್ಮೆಯಿಂದ ಕಾಯುತ್ತಿರುವ ಹಲ್ಲಿಯನ್ನು ನೋಡಿ", ಎಂದರು.

ಕಿಂಗ್ ಅಂಡ್ ಕಂಪೆನಿಯ ಕ್ಯಾಲೆಂಡರಿನ ಮೇಲೆ ಹಲ್ಲಿಯೊಂದು ಒಂದೇ ಸಮನೆ ಒಂದು ಪತಂಗವನ್ನು ದಿಟ್ಟಿಸುತ್ತಿತ್ತು. ನಾವು ಅದನ್ನೆ ಗಮನಿಸಿದೆವು; ಮೊದಲು ಅಲುಗಾಡದೆ ಇದ್ದು ಅನಂತರ ನಿಧಾನವಾಗಿ ಎಚ್ಚರದಿಂದ ಮುಂದಕ್ಕೆ ಸಾಗಿ ಅದು ಕಡೆಗೆ ಒಂದೇ ಹಾರಿನಲ್ಲಿ ಪತಂಗವನ್ನು ತನ್ನ ಬಾಯಿಯಲ್ಲಿ ಹಿಡಿಯಿತು.

"ಭೇಷ್", ಕಂಠಿಬಾಬು ಎಂದರು. "ಅಲ್ಲಿಗೆ ಊಟದ ಏರ್ಪಾಟಾಯಿತು. ಆಹಾರ! ಆಹಾರವೆ ಬದುಕಿನಲ್ಲಿ ಮುಖ್ಯವಾದ ಯೋಚನೆ. ಹುಲಿಗಳು ಮನುಷ್ಯರನ್ನು ತಿನ್ನುತ್ತವೆ, ಮನುಷ್ಯರು ಮೇಕೆಗಳನ್ನು ತಿನ್ನುತ್ತಾರೆ, ಮೇಕೆಗಳು, ಆವು ಏನನ್ನು ತಿನ್ನುವುದಿಲ್ಲ? ನೀವು ಇದನ್ನೆಲ್ಲ ಯೋಚಿಸಿದರೆ ಎಲ್ಲ ಕ್ರೂರ, ಅನಾಗರಿಕ ಎಂದು ಕಾಣುತ್ತದೆ. ಆದರೆ ಇದೇ ವಿಶ್ವದ ನಿಯಮ. ಅದರಿಂದ ತಪ್ಪಿಸಿಕೊಳ್ಳುವ ಹಾಗೇ ಇಲ್ಲ. ಈ ಪ್ರಕ್ರಿಯೆ ನಿಂತರೆ ಸೃಷ್ಟಿಯೇ ನಿಂತು ಹೋಗುತ್ತದೆ."

"ಸಸ್ಯಾಹಾರಿಯಾಗುವುದೇ ಉತ್ತಮವೇನೋ", ನಾನು ಧೈರ್ಯಮಾಡಿ ಹೇಳಿದೆ.

"ಯಾರು ಹಾಗೆ ಹೇಳುವವರು? ಎಲೆಗಳಿಗೆ, ತರಕಾರಿಗಳಿಗೆ ಜೀವವಿಲ್ಲ ಎಂದು ಅಂದುಕೊಂಡಿದ್ದೀರೇನು?"

"ಖಂಡಿತ ಇದೆ. ನೀವು ಮತ್ತು ಜಗದೀಶ ಬೋಸರು ಮಾಡಿದ ಕೆಲಸದಿಂದ ನನಗೆ ಅದು ಸದಾ ನೆನಪಿರುತ್ತದೆ. ಆದರೆ ಅದು ಒಂದೇ ರೀತಿಯ ಬದುಕಲ್ಲ ಅಲ್ಲವೆ? ಸಸ್ಯಗಳು, ಪ್ರಾಣಿಗಳು ಒಂದೇ ಆಗಿರಲು ಸಾಧ್ಯವಿಲ್ಲ."

"ಅವು ಸಂಪೂರ್ಣವಾಗಿ ಬೇರೆ ಬೇರೆ ಎಂದುಕೊಂಡಿದ್ದೀರೇನು ನೀವು?"

"ಅಲ್ಲವೇನು? ವ್ಯತ್ಯಾಸಗಳನ್ನು ನೋಡಿ. ಮರಗಳು ನಡೆಯಲಾರವು, ತಮ್ಮ ಭಾವನೆಗಳನ್ನು ತೋರಿಸಿ ಕೊಳ್ಳಲಾರವು ಮತ್ತು ಅವಕ್ಕೆ ಭಾವನೆ ಉಂಟು ಎಂದೂ ನಮಗೆ ತೋರಿಸಿಕೊಳ್ಳಲಾರವು. ನೀವು ಈ ಮಾತನ್ನು ಒಪ್ಪುವುದಿಲ್ಲವೇನು?"

ಕಂಠಿಬಾಬು ಏನನ್ನೋ ಹೇಳುವವರಂತೆ ತೋರಿತು. ಆದರೆ ಏನನ್ನೂ ಹೇಳಲಿಲ್ಲ. ಚಹ ಕುಡಿದು ಮುಗಿಸಿ ಕಣ್ಣನ್ನು ನೆಲದತ್ತ ಮಾಡಿ ಸ್ವಲ್ಪ ಹೊತ್ತು ಕುಳಿತರು, ಅನಂತರ ನನ್ನನ್ನೆ ದಿಟ್ಟಿಸಿ ನೋಡಿದರು. ತುಂಬ ಆತಂಕಗೊಂಡು ಯಾವುದೋ ಕಾಟಕ್ಕೆ ಸಿಕ್ಕಂತೆ ಕಂಡ ಅವರ ನೋಟ ನನ್ನನ್ನು ಯಾವುದೋ ಅರ್ಥವಾಗದ ಅಪಾಯದ ಭಯದಿಂದ ತಳಮಳಗೊಳಿಸಿತು. ಅವರ ಹೊರರೂಪವೇ ಎಷ್ಟು ಬದಲಾಯಿಸಿ ಬಿಟ್ಟಿತು!

ಅನಂತರ ಅವರು ನಿಧಾನವಾಗಿ ಹೇಳಲಾರಂಭಿಸಿದರು. "ಪರಿಮಳ್, ನಾನು ವಾಸಿಸುವುದು ಇಲ್ಲಿಂದ ಇಪ್ಪತ್ತೊಂದು ಮೈಲಿ ದೂರದಲ್ಲಿ, ಐವತ್ತೆಂಟನೆಯ ವಯಸ್ಸಿನಲ್ಲಿ ನಿಮ್ಮ ವಿಳಾಸವನ್ನು ನಿಮ್ಮ ಪ್ರಕಾಶಕರಿಂದ ಪಡೆಯುವುದಕ್ಕೋಸ್ಕರ ಕಾಲೇಜ್ ರಸ್ತೆಗೆ ಹೋಗುವಷ್ಟು ಶ್ರಮವಹಿಸಿದ್ದೇನೆ. ಈಗ ಇಲ್ಲಿದ್ದೇನೆ. ಒಂದು ವಿಶೇಷ ಕಾರಣವಿಲ್ಲದೆ ನಾನು ಇಷ್ಟೆಲ್ಲ ಪ್ರಯತ್ನ ಮಾಡುತ್ತಿರಲಿಲ್ಲ ಎನ್ನುವುದು ನಿಮಗೆ ಅರ್ಥವಾಗಿದೆ ಎಂದುಕೊಂಡಿದ್ದೇನೆ. ನಿಮಗೆ ಅರ್ಥವಾಗಿದೆ ತಾನೆ? ಅಥವಾ ಆ ದಡ್ಡ ಕಾದಂಬರಿಗಳನ್ನು ಬರೆಯುವುದರಲ್ಲಿ ನಿಮ್ಮ ವಿವೇಚನೆಯನ್ನ

ಕಳೆದುಕೊಂಡಿದ್ದೀರೋ? ಪ್ರಾಯಶಃ ನೀವು ಒಂದು ಕತೇಲಿ ಉಪಯೋಗಿಸಿಕೊಳ್ಳೋದಕ್ಕೆ ನಾನೊಬ್ಬ ಕುತೂಹಲಕರ ಮಾದರಿ ಅಂತ ಯೋಚಿಸ್ತಾ ಇರಬಹುದು."

ನನಗೆ ನಾಚಿಕೆಯಾಯಿತು. ಕಂಟಬಾಬು ಹೇಳಿದ್ದು ಬಹಳ ತಪ್ಪಾಗಿ ಏನೂ ಇರಲಿಲ್ಲ. ವಾಸ್ತವವಾಗಿ ಅವರನ್ನು ನನ್ನ ಒಂದು ಕಾದಂಬರಿಯಲ್ಲಿ ಒಂದು ಪಾತ್ರವಾಗಿ ಬಳಸಲು ಸಾಧ್ಯವೆ ಎಂದು ಯೋಚಿಸುತ್ತಿದ್ದೆ.

"ಪರಿಮಳ್, ನಿಮ್ಮ ಬರಹಕ್ಕೂ ಬದುಕಿಗೂ ಸಂಬಂಧ ಇಲ್ಲದೆ ಹೋದರೆ ನಿಮ್ಮ ಪುಸ್ತಕಗಳಿಗೆ ಯಾವಾಗಲೂ ಗಹನತೆ ಬರುವುದಿಲ್ಲ. ನಿಮ್ಮ ಕಲ್ಪನೆ ಎಷ್ಟೇ ಪ್ರಬಲವಾಗಿದ್ದರೂ ಅದು ಸತ್ಯಕ್ಕಿಂತ ವಿಚಿತ್ರವಾಗಿರೋದಕ್ಕೆ ಸಾಧ್ಯವೇ ಇಲ್ಲ ಅನ್ನೋದನ್ನ ನೀವು ಜ್ಞಾಪಕ ಇಟ್ಕೋಬೇಕು....ಹೋಗಲಿ ಬಿಡಿ, ನಾನು ಉಪದೇಶ ಮಾಡ್ಲಿಕ್ಕೆ ಬಂದಿಲ್ಲ. ವಾಸ್ತವವಾಗಿ ನೀವು ನನಗೊಂದು ಉಪಕಾರ ಮಾಡಬೇಕು ಅಂತ ಬೇಡಿಕೊಳ್ಳುವುದಕ್ಕೆ ಬಂದಿದ್ದೇನೆ."

ನನ್ನಿಂದ ಅವರಿಗೇನು ಸಹಾಯಬೇಕು ಅಂತ ಆಶ್ಚರ್ಯವಾಯಿತು ನನಗೆ.

"ನಿಮ್ಮ ಬಂದೂಕನ್ನ ಇನ್ನೂ ಇಟ್ಕೊಂಡಿದ್ದೀರೊ ಅಥವ ಕೊಟ್ಬಿಟ್ಟಿರೊ?"

ಅವರ ಪ್ರಶ್ನೆ ಕೇಳಿ ನಾನು ಸ್ವಲ್ಪ ಚಕಿತನಾದೆ. ಅವರ ಮನಸ್ಸಿನಲ್ಲಿ ಏನಿದ್ದಿರಬಹುದು? ನಾನು, "ಬಂದೂಕು ಇನ್ನೂ ಇದೆ, ಆದರೆ ತುಂಬ ತುಕ್ಕು ಹಿಡಿದಿರಬಹುದು. ಯಾಕೆ ಕೇಳಿದಿರಿ?" ಎಂದೆ.

"ನಾಳೆ ಬಂದೂಕನ್ನು ತೆಗೆದುಕೊಂಡು ನನ್ನ ಮನೆಗೆ ಬರುವುದಕ್ಕೆ ಸಾಧ್ಯವೇ?"

ಅವರ ಮುಖವನ್ನ ಪರೀಕ್ಷಿಸಿದೆ. ಅವರೇನೂ ತಮಾಷೆ ಮಾಡುತ್ತಿರುವಂತೆ ಕಾಣಲಿಲ್ಲ. "ತೋಟಾಗಳನ್ನೂ ತೆಗೆದುಕೊಂಡು ಬನ್ನಿ," ಎಂದರು. ಏನು ಹೇಳಬೇಕೆಂದು ನನಗೆ ಗೊತ್ತಾಗಲಿಲ್ಲ. ಅವರ ಸಂಭಾಷಣೆಯಲ್ಲಿ ಅದು ತೋರಿಸಿಕೊಳ್ಳದಿದ್ದರೂ ಸ್ವಲ್ಪ ಬುದ್ಧಿಭ್ರಮಣೆ ಇರಬಹುದೆ ಎಂದುಕೊಂಡೆ. ಆತ ಯಾವಾಗಲೂ ಸ್ವಲ್ಪ ವಿಚಿತ್ರ ಮನುಷ್ಯರೆ, ಇಲ್ಲವಾದರೆ ವಿಚಿತ್ರ ಸಸ್ಯಗಳನ್ನು ಹುಡುಕಿಕೊಂಡು ಹೋಗಿ ಕಾಡಿನಲ್ಲಿ ತಮ್ಮ ಪ್ರಾಣವನ್ನೇಕೆ ಅಪಾಯಕ್ಕೊಡ್ಡಬೇಕು?

"ಬಂದೂಕು ತೆಗೆದುಕೊಂಡು ಬರೋದಕ್ಕೇನಡ್ಡಿಯಿಲ್ಲ" ನಾನೆಂದೆ, "ಆದರೆ ಕಾರಣ ತಿಳಿದುಕೊಳ್ಳುವುದಕ್ಕೆ ನನಗೆ ತುಂಬ ಕುತೂಹಲ. ನೀವು ವಾಸಮಾಡುವ ಸ್ಥಳದಲ್ಲಿ ಕಾಡುಪ್ರಾಣಿಗಳಾಗಲಿ, ಕಳ್ಳಕಾಕರಾಗಲಿ ಇದ್ದಾರೇನು?"

"ನೀವು ಬಂದಾಗ ನಿಮಗೆ ಎಲ್ಲವನ್ನೂ ಹೇಳುತ್ತೇನೆ. ಬಂದೂಕಿನ ಅವಶ್ಯಕತೆಯೇ ಬರದೆ ಇರಬಹುದು; ಅದು ಅಗತ್ಯವೇ ಆದರೂ ಕಾನೂನಿನ ಪ್ರಕಾರ ನಿಮಗೆ ಶಿಕ್ಷೆಯಾಗಬಹುದಾದಂತಹ ಯಾವುದೇ ಕೆಲಸದಲ್ಲಿ ನಿಮ್ಮನ್ನು ಸಿಕ್ಕಿಸೋದಿಲ್ಲ ಅಂತ ಭರವಸೆ ಕೊಡ್ತೇನೆ."

ಹೊರಡುವುದಕ್ಕೆಂದು ಕಂಟಬಾಬು ಎದ್ದರು. ನನ್ನ ಭುಜದ ಮೇಲೆ ಕೈಯಿಟ್ಟು ಅವರು ಹೇಳಿದರು. "ಪರಿಮಳ್, ನಾನು ನಿಮ್ಮ ಹತ್ತಿರ ಯಾಕೆ ಬಂದೆ ಅಂದರೆ ಹೋದಸಲ ನಿಮ್ಮನ್ನು ನೋಡಿದಾಗ ನನ್ನ ಹಾಗೆ ನಿಮಗೂ ಸಾಹಸ ಅಂದರೆ ಆಕರ್ಷಣೆಯಿತ್ತು. ನಾನು ಯಾವಾಗಲೂ ಮನುಷ್ಯರ ಜೊತೆ ಹೆಚ್ಚು ಸೇರಿದ್ದಿಲ್ಲ, ಈಗಂತೂ ಆ ಸಂಪರ್ಕ ಇನ್ನೂ ಕಡಮೆ. ನನ್ನ ಸ್ನೇಹಿತರು ಮತ್ತು ಪರಿಚಿತರಲ್ಲಿ ನಿಮ್ಮ ಸಾಮರ್ಥ್ಯ ಇರೋರು ಬೇರೆಯಾರೂ ನೆನಪಿಗೆ ಬರೋದಿಲ್ಲ."

ಹಿಂದೆ ನನ್ನ ರಕ್ತನಾಳಗಳಲ್ಲಿ ಅನುಭವ ಆಗುತ್ತಿದ್ದ ಸಾಹಸದ ರೋಮಾಂಚ ಮತ್ತೆ ಒಂದು ಕ್ಷಣ ಹಿಂದಕ್ಕೆ ಬಂದಂತೆ ಅನ್ನಿಸಿತು. ನಾನು "ಅಲ್ಲಿಗೆ ಬರುವುದು ಹೇಗೆ? ಯಾವಾಗ, ಅದು ಎಲ್ಲಿದೆ ಹೇಳಿ...." ಎಂದೆ.

"ಹೇಳುತ್ತೇನೆ. ಬಾರಸಾತ್ ಸ್ಟೇಷನ್ನಿನವರೆಗೆ ನೇರವಾಗಿ ಜೆಸ್ಸೂರ್ ರಸ್ತೆಯಲ್ಲಿ ಬನ್ನಿ, ಅಲ್ಲಿ ನೀವು ದಾರಿಯನ್ನು ವಿಚಾರಿಸಬೇಕು. ಸ್ಟೇಷನ್ನಿನಿಂದ ನಾಲ್ಕು ಮೈಲಿ ದೂರದಲ್ಲಿ ಮಧುಮುರಳಿ ಸರೋವರ ಇದೆ. ಯಾರಾದರೂ ನಿಮಗೆ ಅದಕ್ಕೆ ದಾರಿ ತೋರಿಸಬಲ್ಲರು. ಸರೋವರದ ಹತ್ತಿರ ನೀಲಿತೋಟವೊಂದರ ಮುದುಕ ಯಜಮಾನನ ಮನೆ ಇದೆ. ಅದರ ಪಕ್ಕದ್ದು ನನ್ನ ಮನೆ. ನಿಮ್ಮ ಹತ್ತಿರ ಕಾರಿದೆ ತಾನೆ?"

"ಇಲ್ಲ, ಆದರೆ ನನ್ನ ಸ್ನೇಹಿತನೊಬ್ಬ ಕಾರಿಟ್ಟಿದ್ದಾನೆ."

"ಯಾರು ಈ ಸ್ನೇಹಿತ?"

"ಅಭಿಜಿತ್, ಕಾಲೇಜಿನಲ್ಲಿ ನನ್ನ ಜೊತೆ ಓದ್ತಾ ಇದ್ದ."

"ಮನುಷ್ಯ ಎಂತಹವನು? ನನಗವನ ಪರಿಚಯವಿದೆಯೆ?"

"ಪ್ರಾಯಶಃ ಇಲ್ಲ, ಆದರೆ ಒಳ್ಳೆಯ ಮನುಷ್ಯ ಎಂದರೆ, ನಂಬಿಗಸ್ತ ಮನುಷ್ಯ ಬೇಕು ಅಂತ ನೀವು ಯೋಚ್ನೆ ಮಾಡ್ತಾ ಇದ್ದರೆ ಸರಿಯಾದ ವ್ಯಕ್ತಿ ಅವನು."

"ಸರಿ, ಅವರನ್ನು ಕರ್ಕೊಂಡು ಬನ್ನಿ. ಏನೇ ಆಗಲಿ ಬಂದೇ ಬನ್ನಿ ಇದು ತುಂಬ ತುರ್ತಿನ ವಿಷಯ ಅಂತ ನಾನು ನಿಮಗೆ ಹೇಳ್ಬೇಕಾಗಿಲ್ಲ. ಸೂರ್ಯ ಮುಳುಗುವುದಕ್ಕೆ ತುಂಬ ಮೊದಲೇ ಬರೋದಕ್ಕೆ ಪ್ರಯತ್ನಪಡಿ."

*　　*　　*

ನಮ್ಮನೇಲಿ ಟೆಲಿಫೋನ್ ಇಲ್ಲ. ನಾನು ರಸ್ತೆ ಮೂಲೆಗೆ ಹೋಗಿ ರಿಪಬ್ಲಿಕ್ ಕೆಮಿಸ್ಟ್ ಔಷಧದ ಅಂಗಡಿಯಿಂದ ಅಭಿಜಿತ್‌ಗೆ ಫೋನ್ ಮಾಡಿದೆ.

"ಈಗಲೇ ಬಂದು ಬಿಡು", ನಾನು ಹೇಳಿದೆ. "ನಿನಗೆ ತುಂಬ ಮುಖ್ಯವಾದ ವಿಷಯ ಹೇಳ್ಬೇಕಾಗಿದೆ."

"ಗೊತ್ತು ನನಗೆ. ನಿನ್ನ ಹೊಸ ಕಥೇನ ನಾನು ಕೇಳ್ಬೇಕು ಅಂತ ನಿನ್ನ ಇಷ್ಟ. ನನಗೆ ಮತ್ತ ನಿದ್ರೆ ಬಂದ್ಬಿಡತ್ತೆ ಅನ್ನಿಸತ್ತೆ".

"ಅದಲ್ಲ, ವಿಷಯ ಬೇರೆ".

"ಏನು ವಿಷಯ? ನೀನು ಗಟ್ಟಿಯಾಗಿ ಯಾಕೆ ಮಾತನ್ನಾಡೋದಿಲ್ಲ?"

"ಮ್ಯಾಸ್ಟಿಫ್ ನಾಯಿಮರಿಯೊಂದು ಮಾರಾಟಕ್ಕಿದೆ. ಆ ಮನುಷ್ಯ ನಮ್ಮನೇಲಿ ಕೂತಿದಾನೆ."

ನಾಯಿ ಸಿಕ್ಕುತ್ತದೆ ಎನ್ನುವ ಆಸೆ ತೋರಿಸದಿದ್ದರೆ ಅಭಿಜಿತ್ ಹೊರಕ್ಕೆ ಬರುವಂತೆ ಮಾಡುವುದೇ ಅಸಾಧ್ಯವಾಗಿತ್ತು. ಅವನ ನಾಯಿಗೂಡುಗಳಲ್ಲಿ ಐದು ಖಂಡಗಳಿಂದ ತಂದ ಹನ್ನೊಂದು ಬಗೆಯ ನಾಯಿಗಳಿದ್ದವು. ಅವುಗಳಲ್ಲಿ ಮೂರಕ್ಕೆ ಬಹುಮಾನಗಳು ಬಂದಿದ್ದವು. ಐದು ವರ್ಷದ ಹಿಂದೆ ಅವನಿಗೆ ನಾಯಿಹುಚ್ಚು ಇಷ್ಟಿರಲಿಲ್ಲ, ಆದರೆ ಈಗ ಇನ್ನೇನನ್ನೂ ಅವನು ಯೋಚನೆ ಮಾಡುತ್ತಿರಲಿಲ್ಲ, ಬೇರೆ ಯಾವ ವಿಷಯವನ್ನು ಕುರಿತು ಮಾತನ್ನಾಡುತ್ತಿರಲಿಲ್ಲ.

ನಾಯಿಗಳಲ್ಲಿ ಪ್ರೀತಿ ಅಲ್ಲದೆ ಅಭಿಜಿತ್‌ನಲ್ಲಿ ಒಂದು ಒಳ್ಳೆಯ ಗುಣವಿತ್ತು; ನನ್ನ ಸಾಮರ್ಥ್ಯ ಮತ್ತು ತೀರ್ಮಾನಗಳಲ್ಲಿ ಅವನಿಗೆ ಪೂರ್ಣ ನಂಬಿಕೆ. ನನ್ನ ಮೊದಲನೆಯ ಕಾದಂಬರಿಯನ್ನು ಯಾವ ಪ್ರಕಾಶಕನೂ ಮುಟ್ಟದಿದ್ದಾಗ ಅಭಿಜಿತ್ ಅದರ ಪ್ರಕಟಣೆಯ ಖರ್ಚನ್ನೂ ವಹಿಸಿಕೊಂಡ. ಅವನು, "ನನಗೆ ಈ ವಿಷಯಗಳೆಲ್ಲ ಅರ್ಥವಾಗೋದಿಲ್ಲ, ಆದರೆ ಅದನ್ನು ನೀನು ಬರೆದಿದ್ದೀಯ, ಆದ್ದರಿಂದ ಅದು ತೀರ ಕಳಪೆಯಾಗಿರಲು ಸಾಧ್ಯವಿಲ್ಲ, ಪ್ರಕಾಶಕರು ಮೂರ್ಖರಿರಬೇಕು," ಎಂದ. ಪುಸ್ತಕ ಚೆನ್ನಾಗಿಯೇ ಮಾರಾಟವಾಯಿತು, ನನಗೆ ಒಂದಿಷ್ಟು ಒಳ್ಳೆಯ ಹೆಸರನ್ನು ತಂದಿತು, ಇದರಿಂದ ಅವನಿಗೆ ನನ್ನಲ್ಲಿದ್ದ ನಂಬಿಕೆ ಸ್ಥಿರವಾಯಿತು.

ಮ್ಯಾಸ್ಟಿಫ್ ಮರಿಯ ಕತೆ ನಿಜವಲ್ಲ ಎಂದು ಗೊತ್ತಾದಾಗ ನನಗೆ ನ್ಯಾಯವಾಗಿ ಬರಬೇಕಾದ್ದುದೆ ಬಂತು. ಅಭಿ, ಚುರುಕ್ ಎನ್ನುವ ಹಾಗೆ ಬೆನ್ನ ಮೇಲೆ ಏಟುಕೊಟ್ಟ. ಆದರೆ ಅದನ್ನು ನಾನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ ಏಕೆಂದರೆ ಅಭಿಜಿತ್ ನನ್ನ ಸೂಚನೆಗೆ ಒಪ್ಪಿಕೊಂಡ.

"ನಾವು ಹೋಗೋಣ. ಎಷ್ಟೋ ದಿನಗಳಿಂದ ನಾವು ಸಂತೋಷವಿಹಾರ ಹೊಗಿಯೇ ಇಲ್ಲ. ಹೋದಸಲ ಹೋದದ್ದು ಸೋನಾರ್‌ಪುರದ ಜೌಗು ಪ್ರದೇಶಕ್ಕೆ, ಉಲ್ಲಂಗಿ ಹಕ್ಕಿಯ ಬೇಟೆಗೆ. ಆದರೆ ಯಾರೀ ಮನುಷ್ಯ? ಏನು ಆತ ಹೇಳಿದ ಕತೆ? ನೀನು ನನಗೆ ಇನ್ನಿಷ್ಟು ವಿವರಗಳನ್ನು ಏಕೆ ಕೊಡಲಿಲ್ಲ?"

"ಆತ ನನಗೆ ಇನ್ನೇನೂ ವಿವರಗಳನ್ನು ಹೇಳಲಿಲ್ಲ, ನಾನು ನಿನಗೆ ಹೆಚ್ಚಿಗೆ ಹೇಳುವುದು ಹೇಗೆ? ಅಂದರೆ ಒಂದಿಷ್ಟು ನಿಗೂಢತೆ ಇರುವುದೇ ಒಳ್ಳೆಯದು. ನಮ್ಮ ಕಲ್ಪನೇನ ಉಪಯೋಗಿಸೋದಕ್ಕೆ ಅವಕಾಶ ಇರುತ್ತೆ."

"ಕೊನೇ ಪಕ್ಷ ಆ ಮನುಷ್ಯ ಯಾರು ಅಂತ ಹೇಳು."

"ಕಂಠಿ ಚರಣ ಛಟರ್ಜಿ. ಹೆಸರು ಕೇಳಿದರೆ ನಿನಗೇನಾದರೂ ಹೊಳೆಯುತ್ತೇನು? ಒಂದು ಕಾಲದಲ್ಲಿ ಆತ ಸ್ಕಾಟಿಷ್ ಚರ್ಚ್ ಕಾಲೇಜಿನಲ್ಲಿ ಸಸ್ಯಶಾಸ್ತ್ರದ ಪ್ರೊಫೆಸರಾಗಿದ್ದ. ಆಮೇಲೆ ಉಪಾಧ್ಯಾಯರ ಕೆಲಸ ಬಿಟ್ಟು ಅಪರೂಪದ ಗಿಡಗಳ ಮಾದರಿಗಳನ್ನು ಸಂಗ್ರಹಿಸೋದಕ್ಕೆ ಸಂಚಾರ ಪ್ರಾರಂಭಮಾಡಿದ. ಬೇಕಾದಷ್ಟು ಸಂಶೋಧನೆ ಮಾಡಿ ಅನೇಕ ವಿದ್ವತ್ತಿನ ಪ್ರಬಂಧಗಳನ್ನು ಪ್ರಕಟಿಸಿದ. ಗಿಡಗಳ ಅದ್ಭುತ ಸಂಗ್ರಹವೇ ಆತನ ಹತ್ತಿರ ಇತ್ತು — ಅದರಲ್ಲೂ ಸೀತಾಳೆ ಗಡ್ಡೆಗಳು."

"ನೀನು ಅವರನ್ನ ಭೇಟಿಯಾದದ್ದು ಹೇಗೆ?"

"ಒಂದ್ಸಲ ನಾವಿಬ್ಬರೂ ಅಸ್ಸಾಂನಲ್ಲಿ ಕಾಸಿರಂಗ ಕಾಡಿನ ಬಂಗ್ಲೇಲಿ ಒಟ್ಟಿಗೆ ಇದ್ದೆವು. ನಾನು ಒಂದು ಹುಲೀನ ಹೊಡೀಬಹುದು ಎನ್ನುವ ಆಸೆಯಿಂದ ಹೋಗಿದ್ದೆ. ಆತ ನೆಪೆಂತಿಸ್‌ನ ಹುಡುಕ್ತಾ ಇದ್ದರು."

"ಏನು ಹುಡುಕ್ತಾ ಇದ್ದರು?"

"ನೆಪೆಂತಿಸ್. ಅದು ಸಸ್ಯಶಾಸ್ತ್ರದಲ್ಲಿ ಕೊಟ್ಟಿರೋ ಹೆಸರು. ನಾನೂ ನೀನು ಪಿಚರ್ ಪ್ಲ್ಯಾಂಟ್ ಅಂತೀವಲ್ಲ ಅದು. ಅದು ಅಸ್ಸಾಂನ ಕಾಡುಗಳಲ್ಲಿ ಬೆಳೆಯುತ್ತೆ. ಕೀಟಗಳನ್ನು ತಿಂದು ಬದುಕುತ್ತೆ. ನಾನು ಅದನ್ನು ನೋಡಿಲ್ಲ, ಆದರೆ ಕಂಠಿಬಾಬು ನನಗೆ ಹಾಗೆ ಹೇಳಿದರು."

"ಕೀಟಗಳನ್ನು ತಿನ್ನುತ್ತೆ? ಗಿಡ?"

"ನೀನು ಸಸ್ಯಶಾಸ್ತ್ರ ಓದೇ ಇಲ್ಲ ಅನ್ನೋದು ಗೊತ್ತಾಗ್ತ ಇದೆ."

"ಇಲ್ಲ, ನಾನು ಓದಿಲ್ಲ."

"ನೀನು ನಂಬ್ದೆ ಇರ್ಬೇಕಾದ್ದೇನಿಲ್ಲ. ಇಂಥ ಗಿಡಗಳ ಚಿತ್ರಗಳ್ನ ಪಠ್ಯಪುಸ್ತಕಗಳಲ್ಲಿ ನೋಡ್ಬಹುದು."

"ಸರಿ, ಮುಂದೆ ಹೇಳು".

"ಇನ್ನೇನೂ ಹೇಳೋದಿಕ್ಕೆ ಹೆಚ್ಚಿಲ್ಲ. ನಾನು ಹುಲಿ ಹೊಡೆದು ಹಿಂದಕ್ಕೆ ಬಂದೆ. ಅವರು ಅಲ್ಲೇ ಇದ್ದರು. ಯಾವತ್ತೋ ಒಂದಿವ್ಸ ಅವರ್ನ ಒಂದು ಹಾವು ಕಚ್ಚಿಬಿಡತ್ತೆ ಅಥವ ಕಾಡು ಪ್ರಾಣಿಗೆ ಸಿಕ್ಕಿ ಬೀಳ್ತಾರೆ ಅಂತ ನನಗೆ ತುಂಬ ಭಯ ಇತ್ತು. ಕಲ್ಕತ್ತಕ್ಕೆ ಹಿಂದಕ್ಕೆ ಬಂದಮೇಲೆ ಒಂದೆರಡ್ಸಾರಿ ಮಾತ್ರ ಭೇಟಿಯಾದದ್ದು. ಆದರೆ ಅವರ ವಿಷಯ ನಾನು ಅನೇಕ ಸಲ ಯೋಚ್ನೆ ಮಾಡ್ತಾ ಇದ್ದೆ, ಯಾಕೇಂದ್ರೆ ನನಗೂ ಸ್ವಲ್ಪ ಕಾಲ ಸೀತಾಳೆ ಗಡ್ಡೆಗಳಲ್ಲಿ ತುಂಬ ಆಸಕ್ತಿಯಿತ್ತು. ಅಮೆರಿಕದಿಂದ ಕೆಲವು ಹೊಸಾ ಮಾದರಿಗಳನ್ನು ನನಗೆ ತಂದು ಕೊಡ್ತೇನೆ ಅಂತ ಅವರು ಹೇಳಿದ್ದರು."

"ಅಮೆರಿಕ? ಹಾಗಾದರೆ ಅವರು ಅಮೆರಿಕಕ್ಕೆ ಹೋಗಿದ್ದರಾ?"

"ಅವರ ಒಂದು ಸಂಶೋಧನಾ ಪ್ರಬಂಧ ಬೇರೆ ದೇಶದ ಒಂದು ಸಸ್ಯಶಾಸ್ತ್ರದ ಪತ್ರಿಕೆಯಲ್ಲಿ ಪ್ರಕಟವಾಯಿತು. ಅದರಿಂದ ಅವರು ತುಂಬ ಪ್ರಸಿದ್ಧರಾದರು, ಸಸ್ಯ ವಿಜ್ಞಾನಿಗಳ ಒಂದು ಸಮ್ಮೇಳನಕ್ಕೆ ಅವರಿಗೆ ಆಹ್ವಾನ ಬಂತು. ಅದಾದದ್ದು ಬಹಳ ಕಾಲದ ಹಿಂದೆ, ಐವತ್ತೊಂದು ಅಥವ ಐವತ್ತೆರಡನೆಯ ಇಸವಿಯಲ್ಲಿ, ಅದಾದಮೇಲೆ ಇವತ್ತಿನವರೆಗೆ ಅವರನ್ನು ನೋಡೇ ಇರಲಿಲ್ಲ."

"ಇಷ್ಟು ವರ್ಷವೂ ಏನು ಮಾಡ್ತಾ ಇದ್ದರು ಅವರು"?

"ನನಗಿನ್ನೂ ಗೊತ್ತಿಲ್ಲ. ನಾಳೆ ಗೊತ್ತಾಗತ್ತೆ ಅಂತ ಭರವಸೆ ಇದೆ."

"ಅವರೇನೋ ಐಲುಪೈಲು ಮನುಷ್ಯ ಅಲ್ಲವಲ್ಲ?"

"ನಿನಗಿಂತ ಐಲುಪೈಲೇನಲ್ಲ. ನೀನೂ ನಿನ್ನ ನಾಯಿಗಳೂ ಅವರೂ ಅವರ ಗಿಡಗಳಿಗಿಂತ ಉತ್ತಮ ಏನಲ್ಲ."

ಅಭಿಜಿತ್‌ನ ಸ್ಟ್ಯಾಂಡರ್ಡ್ ಕಾರಿನಲ್ಲಿ ನಾವು ಜೆಸ್ಸೂರ್ ರಸ್ತೆಯಲ್ಲಿ ಬಾರಸಾತ್ ಸ್ಟೇಷನ್ ಕಡೆ ಪ್ರಯಾಣ ಮಾಡಿದೆವು. 'ನಾವು' ಎಂದರೆ ಅಭಿಜಿತ್ ಮತ್ತು ನಾನು ಅಲ್ಲದೆ ಮೂರನೆಯದೊಂದು ಪ್ರಾಣಿ, ಅಭಿಜಿತ್‌ನ ನಾಯಿ ಬಾದ್‌ಷಾ. ಇಲ್ಲೇ ನಾನು ತಪ್ಪು ಮಾಡಿದ್ದು. ನಾನು ಖಚಿತವಾಗಿ ಬೇಡ ಎಂದು ಹೇಳದೆ ಇದ್ದರೆ

ಅಭಿಜಿತ್ ಅವನ ಹನ್ನೊಂದು ನಾಯಿಗಳಲ್ಲಿ ಒಂದನ್ನು ಕರೆದುಕೊಂಡೇ ಬರುತ್ತಾನೆ ಎಂದು ನನಗೆ ಹೊಳೆಯ ಬೇಕಾಗಿತ್ತು.

ಬಾದ್‌ಷಾ ಎನ್ನುವುದು ಕಂದು ಬಣ್ಣದ ರಾಮ್‌ಪುರದ ಬೇಟೆನಾಯಿ. ದೊಡ್ಡದಾಗಿದ್ದು ಬಲಿಷ್ಠವಾಗಿದ್ದ ಆ ನಾಯಿ ಕಾರಿನ ಹಿಂದಿನ ಸೀಟ್ ಅಷ್ಟನ್ನು ಆಕ್ರಮಿಸಿತ್ತು. ಅದರ ಮುಖ ಕಿಟಕಿಯ ಹೊರಕ್ಕೆ ಬಂದಿತ್ತು. ವಿಸ್ತಾರವಾದ ಭತ್ತದ ಹೊಲಗಳನ್ನು ಅದು ಮೆಚ್ಚಿಕೊಂಡ ಹಾಗೆ ಕಾಣುತ್ತಿತ್ತು. ಒಂದೊಂದು ಸಲ ರಸ್ತೆಯ ಪಕ್ಕದಲ್ಲಿದ್ದ ಹಳ್ಳಿಯ ನಾಯಿಗಳನ್ನು ನೋಡಿ ತಿರಸ್ಕಾರದಿಂದ ಗಟ್ಟಿಯಾಗಿ ಶಬ್ದಮಾಡುತ್ತಿತ್ತು.

ಕಂಠಿ ಬಾಬುವಿನ ಮನೆಯನ್ನು ಕಂಡುಹಿಡಿಯಲು ಏನೂ ಕಷ್ಟವಾಗಲಿಲ್ಲ, ಮಧ್ಯಾಹ್ನ ಸುಮಾರು ಎರಡೂವರೆ ಗಂಟೆಗೆ ಅವರ ಮನೆಯನ್ನು ತಲುಪಿದೆವು. ಗೇಟನ್ನು ದಾಟಿದ ಮೇಲೆ ಕಾರು ಸಾಗುವ ಮಾರ್ಗ ಅವನ ಬಂಗಲೆಗೆ ಒಯ್ದಿತು. ಅವನ ಮನೆಯ ಹಿಂಭಾಗದಲ್ಲಿ ಕಾರ್ಖಾನೆಯಂತೆ ಕಾಣುತ್ತಿದ್ದ ತಗಡು ಷೆಡ್ ಪಕ್ಕದಲ್ಲಿ ದೊಡ್ಡದೊಂದು ಒಣಗಿದ ಶಿರೀಷ್ ಮರವಿತ್ತು. ರಸ್ತೆಯಾಚೆ ಮನೆಗೆ ಎದುರಾಗಿ ತೋಟವಿತ್ತು. ತೋಟದಾಚೆ ಉದ್ದವಾದ ಟಿನ್ ಷೆಡ್ ಒಂದರಲ್ಲಿ ಥಳಥಳ ಹೊಳೆಯುತ್ತಿದ್ದ ಗಾಜಿನ ಗೂಡುಗಳನ್ನು ಒಂದು ಸಾಲಾಗಿ ಜೋಡಿಸಿತ್ತು.

ಕಂಠಿ ಬಾಬು ನಮ್ಮನ್ನು ಸ್ವಾಗತಿಸಿದರು, ಆದರೆ ಬಾದ್‌ಷಾನನ್ನು ಕಂಡು ಸ್ವಲ್ಪ ಹುಬ್ಬು ಗಂಟು ಹಾಕಿದರು.

"ಈ ನಾಯಿಗೆ ತರಬೇತಿ ಆಗಿದೆಯೇನು" ಎಂದು ಕೇಳಿದರು.

ಅಭಿ ಹೇಳಿದ, "ಅದು ನಾನು ಹೇಳಿದ ಹಾಗೆ ಕೇಳುತ್ತೆ. ಆದರೆ ಅಕ್ಕಪಕ್ಕದಲ್ಲಿ ತರಬೇತಿ ಇಲ್ಲದ ನಾಯಿಗಳಿದ್ದರೆ ಏನಾಗುವುದೋ ಹೇಳಲಾರೆ. ನೀವು ನಾಯಿಗಳನ್ನು ಇಟ್ಟಿದ್ದೀರೇನು?"

"ಇಲ್ಲ. ನಿಮ್ಮ ನಾಯಿಯನ್ನು ನಾವು ಕುಳಿತುಕೊಳ್ಳುವ ಕೊಠಡಿಯಲ್ಲಿನ ಈ ಕಿಟಕಿಗೆ ಕಟ್ಟುಬಿಡಿ."

ಅಭಿಜಿತ್ ಕಡೆಗಣ್ಣಲ್ಲಿ ನನ್ನ ಕಡೆ ನೋಡಿ ಕಣ್ಣು ಮಿಟುಕಿಸಿದ, ಆದರೂ ವಿಧೇಯ ಬಾಲಕನ ಹಾಗೆ ನಾಯಿಯನ್ನು ಕಟ್ಟಿದ. ಬಾದಷಾ ಸೌಮ್ಯವಾಗಿ ಪ್ರತಿಭಟಿಸಿತು, ಆದರೂ ಅದನ್ನು ಒಪ್ಪಿಕೊಂಡಹಾಗೆ ಕಂಡಿತು.

ಹೊರಗಡೆ ವರಾಂಡದಲ್ಲಿ ನಾವು ಬೆತ್ತದ ಕುರ್ಚಿಗಳಲ್ಲಿ ಕುಳಿತುಕೊಂಡೆವು. ತಮ್ಮ ಸೇವಕ ಪ್ರಯಾಗನ ಬಲಗೈ ಗಾಯವಾದದ್ದರಿಂದ ತಾನೇ ನಮಗಾಗಿ ಒಂದಿಷ್ಟು ಟೀ ಮಾಡಿ ಫ್ಲಾಸ್ಕಿನಲ್ಲಿ ಹಾಕಿಟ್ಟಿರುವುದಾಗಿಯೂ ನಮಗೆ ಬೇಕೆನ್ನಿಸಿದಾಗ ಕೇಳಬೇಕೆಂದೂ ಕಂಠಿಬಾಬು ಹೇಳಿದರು.

ಇಷ್ಟು ಶಾಂತವಾದ ಸ್ಥಳದಲ್ಲಿ ಯಾವ ಅಪಾಯ ಅಡಗಿಕೊಂಡಿರಬಹುದು ಎಂದು ಊಹಿಸಲು ನನಗೆ ಸಾಧ್ಯವಾಗಲಿಲ್ಲ. ಪಕ್ಷಿಗಳ ಚಿಲಿಪಿಲಿ ಬಿಟ್ಟರೆ ಎಲ್ಲ ಮೌನವಾಗಿತ್ತು. ರೈಫಲನ್ನು ಹಿಡಿದುಕೊಂಡಿರುವುದು ದಡ್ಡತನ ಎನ್ನಿಸಿ ಅದನ್ನು ಗೋಡೆಗೆ ಒರಗಿಸಿಟ್ಟೆ.

ಅಭಿ ಮೂಲತಃ ಸುಮ್ಮನೆ ಕುಳಿತುಕೊಳ್ಳಲಾರದ ನಗರದ ಮನುಷ್ಯ. ಗ್ರಾಮೀಣಪ್ರದೇಶದ ಚೆಲುವು, ನಮಗೆ ತಿಳಿಯದ ಹಕ್ಕಿಗಳ ಹಾಡುಗಳು - ಯಾವುವೂ ಅವನ ಮೇಲೆ ಪರಿಣಾಮ ಮಾಡುವುದಿಲ್ಲ. ಸ್ವಲ್ಪಹೊತ್ತು ಚಡಪಡಿಸುತ್ತಿದ್ದವನು ಥಟ್ಟನೆ ಹೇಳಿದ, "ಯಾವುದೋ ವಿಲಕ್ಷಣ ಜಾತಿ ಗಿಡ ಒಂದನ್ನ ಹುಡುಕುತ್ತಾ ಇದ್ದಾಗ ಅಸ್ಸಾಮಿನ ಕಾಡಿನಲ್ಲಿ ಒಂದು ಹುಲಿ ನಿಮ್ಮನ್ನ ಕೊಲ್ಲುವುದರಲ್ಲಿತ್ತು ಅಂತ ಪರಿಮಳ್ ಹೇಳಿದ."

ಉತ್ಪ್ರೇಕ್ಷೆಯಿಂದ ತನ್ನ ಮಾತನ್ನ ನಾಟಕೀಯ ಮಾಡುವುದು ಅಭಿಗೆ ಇಷ್ಟ. ಕಂಠಿಬಾಬುಗೆ ಅವನು ಅಸಮಾಧಾನ ಮಾಡಿಬಿಡುವನೋ ಎಂದು ನನಗೆ ಆತಂಕವಾಯಿತು. ಆದರೆ ಅವರು ಮುಗುಳ್ನಗೆ ನಕ್ಕು, "ನಿಮಗೆ ಕಾಡಿನಲ್ಲಿ ಅಪಾಯ ಅಂದರೆ ಹುಲಿಯಿಂದಲೇ ಅಂತ ಅರ್ಥ, ಅಲ್ಲವೇ? ಬಹುಮಂದಿ ಹಾಗೇ ಭಾವಿಸುತ್ತಾರೆ. ಆದರೆ ...... ಇಲ್ಲ, ನನಗೆ ಹುಲಿ ಎದುರಾಗಲಿಲ್ಲ. ಒಂದು ಸಲ ಒಂದು ಜಿಗಣೆ ನನಗೆ ಕಚ್ಚಿತ್ತು, ಆದರೆ ಅದೇನು ದೊಡ್ಡ ವಿಷಯವಲ್ಲ" ಎಂದರು.

"ಗಿಡ ಸಿಕ್ಕಿತೇನು?"

"ಯಾವ ಗಿಡ?"

"ಪಿಚರ್ರೋ ಫ್ಲೂಟರ್ರೋ ಅದೇನೋ ನೀವು ಕರೀತೀರಲ್ಲ?"

"ಓ ನೀವು ಹೇಳೋದು ನೆಪೆಂತಿಸ್. ಹೌದು ಸಿಕ್ಕಿತು. ಈಗಲೂ ನನ್ನ ಹತ್ತಿರ ಇದೆ. ಈಗ ನನಗೆ ಮಾಂಸಾಹಾರಿ ಗಿಡಗಳನ್ನು ಬಿಟ್ಟರೆ ಉಳಿದ ಗಿಡಗಳಲ್ಲಿ ಹೆಚ್ಚು ಆಸಕ್ತಿ ಇಲ್ಲ. ಸೀತಾಳೆಗೆಡ್ಡೆಗಳಲ್ಲೂ ಅನೇಕವನ್ನ ಕೊಟ್ಟು ಬಿಟ್ಟಿದ್ದೇನೆ."

ಕಂಠಿ ಬಾಬು ಒಳಕ್ಕೆ ಹೋದಾಗ ನಾನು ಮತ್ತು ಅಭಿ ಒಬ್ಬರ ಮುಖವನ್ನೊಬ್ಬರು ನೋಡಿದೆವು. ಮಾಂಸಾಹಾರಿ ಸಸ್ಯಗಳು! ಕಾಲೇಜಿನಲ್ಲಿ ಓದುತ್ತಿದ್ದ ಸಸ್ಯಶಾಸ್ತ್ರದ ಪಠ್ಯಪುಸ್ತಕ ಮತ್ತು ಹದಿನೈದು ವರ್ಷಗಳ ಹಿಂದೆ ನೋಡಿದ ಕೆಲವು ಚಿತ್ರಗಳ ಅಸ್ಪಷ್ಟ ನೆನಪು ನನಗಾಯಿತು.

ಕಂಠಿ ಬಾಬು ಒಂದು ಸೀಸೆಯನ್ನು ಹಿಡಿದುಕೊಂಡು ಹಿಂದಕ್ಕೆ ಬಂದರು. ಅದರಲ್ಲಿ ಮಿಡತೆಗಳು, ಜೀರುಂಡೆಗಳು ಮತ್ತು ಬೇರೆ ಬೇರೆ ಗಾತ್ರಗಳ ಕೀಟಗಳಿದ್ದವು. ಮೆಣಸಿನ ಪುಡಿಯ ಕುಡಿಕೆಯ ಮುಚ್ಚಳದಲ್ಲಿರುವಂತೆ ಈ ಸೀಸೆಯ ಬಿರಟಿನಲ್ಲಿ ತೂತುಗಳಿದ್ದವು. "ಆಹಾರ ಕೊಡುವ ಸಮಯ", ಅವರೆಂದರು, "ನನ್ನ ಜೊತೆಗೆ ಬನ್ನಿ".

ಗಾಜಿನ ಗೂಡುಗಳಿದ್ದ ಟಿನ್ ಷೆಡ್‌ಗೆ ನಾವು ಹೋದೆವು. ಪ್ರತಿ ಗೂಡಿನಲ್ಲಿಯೂ ಬೇರೆ ತರಹದ ಗಿಡವಿತ್ತು. ಇವುಗಳಲ್ಲಿ ಯಾವುದನ್ನೂ ನಾನು ಹಿಂದೆ ನೋಡಿರಲಿಲ್ಲ.

"ಈ ಗಿಡಗಳು ನಮ್ಮ ದೇಶದಲ್ಲಿ ಕಾಣುವುದಿಲ್ಲ", ಕಂಠಿ ಬಾಬು ಹೇಳಿದರು. "ನೆಪೆಂತಿಸ್ ಬಿಟ್ಟು ಯಾವುದೂ ಕಾಣುವುದಿಲ್ಲ. ಒಂದು ನೇಪಾಳದ್ದು, ಮತ್ತೊಂದು ಆಫ್ರಿಕದ್ದು. ಉಳಿದುವನ್ನು ಮಧ್ಯ ಅಮೆರಿಕದಿಂದ ತಂದೆ."

ಗಿಡಗಳು ನಮ್ಮ ನೆಲದಲ್ಲಿ ಹೇಗೆ ಉಳಿಯುತ್ತವೆ ಎಂದು ಅಭಿಜಿತ್ ಕೇಳಿದ.

"ಅವಕ್ಕೂ ನೆಲಕ್ಕೂ ಸಂಬಂಧವಿಲ್ಲ," ಕಂಠಿ ಬಾಬು ಉತ್ತರಿಸಿದರು.

"ಅದು ಹೇಗೆ?"

"ಇವಕ್ಕೆ ನೆಲದಿಂದ ಪುಷ್ಟಿದೊರೆಯುವುದಿಲ್ಲ. ಮನುಷ್ಯರು ಹೊರಗಡೆಯಿಂದ ಆಹಾರ ಪಡೆದು ತಮ್ಮ ದೇಶವಲ್ಲದೆ ಬೇರೆ ಅನೇಕ ದೇಶಗಳಲ್ಲಿ ನೆಮ್ಮದಿಯಾಗಿ ಉಳಿದು ಬದುಕುವ ಹಾಗೆ ಇವೂ ಅವುಗಳಿಗೆ ಸರಿಯಾದ ಆಹಾರ - ಆ ಆಹಾರ ಏನಾದರೂ ಆಗಲಿ - ದೊರಕುವಷ್ಟು ಕಾಲ ಚೆನ್ನಾಗಿ ಬದುಕುತ್ತವೆ."

ಕಂಠಿ ಬಾಬು ಒಂದು ಗಾಜಿನ ಗೂಡಿನ ಹತ್ತಿರ ನಿಂತರು. ಅದರೊಳಗೊಂದು ವಿಚಿತ್ರವಾದ ಗಿಡವಿತ್ತು; ಅದಕ್ಕೆ ಸುಮಾರು ಎರಡು ಅಂಗುಲ ಉದ್ದದ ಎಲೆಗಳು; ಗರಗಸಕ್ಕಿರುವಂತೆ ಹಲ್ಲಿನ ಸಾಲಿನಂತಹ ಬಿಳೀ ಅಂಚು. ಗಾಜಿನ ಗೂಡಿಗೆ ಸೀಸೆಯ ಬಾಯಿಯಷ್ಟೇ ಗಾತ್ರದ ಸುತ್ತುವ ಬಾಗಿಲಿತ್ತು. ಸರಸರನೆ ಕೈ ಆಡಿಸುತ್ತ ಕಂಠಿ ಬಾಬು ಬಾಗಿಲನ್ನು ತೆರೆದರು, ಸೀಸೆಯ ಬಿರಟೆಯನ್ನೂ ತೆರೆದರು, ಸೀಸೆಯ ಮೂತಿಯನ್ನು ಬಾಗಿಲಿನಲ್ಲಿ ನೂಕಿದರು. ಚಿಟ್ಟೆಯೊಂದು ಹೊರಕ್ಕೆ ಬರುತ್ತಲೇ ಅವರು ವೇಗವಾಗಿ ಸೀಸೆಯನ್ನು ಹಿಂದಕ್ಕೆ ತೆಗೆದುಕೊಂಡು ಬಾಗಿಲನ್ನು ಮುಚ್ಚಿದರು. ಚಿಟ್ಟೆ ಸ್ವಲ್ಪ ಹೊತ್ತು ಅತ್ತಿತ್ತ ಹಾರಾಡಿ ಒಂದು ಎಲೆಯ ಮೇಲೆ ಕುಳಿತುಕೊಂಡಿತು. ಕೂಡಲೇ ಎಲೆ ಮಧ್ಯದಲ್ಲಿ ಮಡಿಸಿಕೊಂಡು ಚಿಟ್ಟೆಯನ್ನು ಬಿಗಿಯಾಗಿ ಹಿಡಿದಿಟ್ಟುಬಿಟ್ಟಿತು. ಹಲ್ಲುಗಳ ತೋಡುಗಳು ಒಂದಕ್ಕೊಂದು ಎಷ್ಟು ಗಟ್ಟಿಯಾಗಿ ಕೂಡಿಕೊಂಡವು ಎಂದರೆ ಆ ಪಂಜರದಿಂದ ಚಿಟ್ಟೆ ತಪ್ಪಿಸಿಕೊಳ್ಳುವುದು ಸಾಧ್ಯವೇ ಇರಲಿಲ್ಲ.

ನಿಸರ್ಗವೇ ಸೃಷ್ಟಿಸಿದ್ದು, ಇಷ್ಟು ವಿಚಿತ್ರವಾಗಿ ಇಷ್ಟು ಭಯಂಕರವಾಗಿದ್ದ ಬೋನನ್ನು ನಾನು ನೋಡಿಯೇ ಇರಲಿಲ್ಲ.

ಉಸಿರುಕಟ್ಟಿದ ದನಿಯಲ್ಲಿ ಅಭಿ ಕೇಳಿದ, "ಕೀಟವು ಯಾವಾಗಲೂ ಎಲೆಯ ಮೇಲೆ ಕುಳಿತಿರುತ್ತದೆ ಎಂಬುದು ಖಂಡಿತವೇ?"

"ಹೌದು. ಈ ಗಿಡಗಳಿಂದ ಹೊರಹೊಮ್ಮುವ ಒಂದು ವಾಸನೆ ಕೀಟವನ್ನು ಆಕರ್ಷಿಸುತ್ತೆ. ಇದಕ್ಕೆ

ಪ್ರೇಮದೇವತೆ ವೀನಸಳ ನೊಣದ ಜಾಲ ಅಂತ ಹೆಸರು. ಇದನ್ನ ಮಧ್ಯ ಅಮೆರಿಕದಿಂದ ತಂದಿದ್ದೆ ಸಸ್ಯ ಶಾಸ್ತ್ರದ ಎಲ್ಲ ಪಠ್ಯಪುಸ್ತಕಗಳಲ್ಲೂ ಇದರ ಹೆಸರಿದೆ" ಎಂದರು ಕಂಠಿ ಬಾಬು.

ಅತ್ಯಂತ ಬೆರಗಾಗಿ ನಾನು ಕೀಟವನ್ನೆ ನೋಡುತ್ತಿದ್ದೆ. ಅದು ಪ್ರಾರಂಭದಲ್ಲಿ ಸ್ವಲ್ಪ ಅತ್ತಿತ್ತ ಜೋರಾಗಿ ಅಲ್ಲಾಡಿತು, ಆದರೆ ಈಗ ಮುಜುಗರ ಪಡುತ್ತಿತ್ತು. ಅದರ ಮೇಲೆ ಎಲೆಯ ಒತ್ತಡ ಹೆಚ್ಚಾಗಿತ್ತು. ಬೇಟೆ ಆಡುವುದರಲ್ಲಿ ಗಿಡವು ಹಲ್ಲಿಯಷ್ಟೇ ಕ್ರೂರವಾಗಿತ್ತು.

ಅಭಿ ಮುಗುಳ್ನಗೆ ನಗಲು ಕಷ್ಟಪಟ್ಟು ಪ್ರಯತ್ನಿಸಿದ. "ಮನೇಲಿ ಇಂತಹ ಒಂದು ಗಿಡವನ್ನು ಇಟ್ಟು ಕೊಳ್ಳೋದು ಒಳ್ಳೆಯ ಯೋಚನೆಯೇ. ಹುಳಹುಪ್ಪಟೇನ ಓಡಿಸೋದಕ್ಕೆ ಸುಲಭವಾದ ಮಾರ್ಗ. ಜಿರಳೆಗಳನ್ನು ಕೊಲ್ಲೋದಕ್ಕೆ ಡಿ.ಡಿ.ಟಿ. ಪುಡಿ ಇನ್ನು ಬೇಕಿಲ್ಲ"

"ಉಹುಂ, ಈ ಗಿಡ ಸಾಲದು", ಕಂಠಿ ಬಾಬು ಹೇಳಿದರು, "ಅದಕ್ಕೆ ಜಿರಳೆಗಳನ್ನು ಅರಗಿಸಿಕೊಳ್ಳೋದಕ್ಕೆ ಆಗುವುದಿಲ್ಲ, ಅದರ ಎಲೆಗಳು ತೀರ ಸಣ್ಣವು."

ಪಕ್ಕದ ಗಾಜಿನ ಗೂಡಿನಲ್ಲಿ "ಲಿಲಿ" ಗಿಡದ ಎಲೆಗಳಂತೆ ಉದ್ದವಾದ ಎಲೆಗಳಿರುವ ಗಿಡವನ್ನು ನೋಡಿದೆವು. ಪ್ರತಿ ಎಲೆಯಿಂದ ಸಣ್ಣ ಚೀಲದಂತಹ ಒಂದು ವಸ್ತು ನೇತುಬಿದ್ದಿತ್ತು. ನಾನು ನೋಡಿದ್ದ ಚಿತ್ರಗಳಿಂದ ಅದರ ಗುರುತು ಹಿಡಿದೆ.

"ಇದು ನೆಪೆಂತಿಸ್, ಇದನ್ನೇ ಪಿಚರ್ ಗಿಡ ಎನ್ನುತ್ತಾರೆ." ಕಂಠಿ ಬಾಬು ವಿವರಿಸಿದರು. "ಇದರ ಹಸಿವು ಇನ್ನೂ ಹೆಚ್ಚು. ಅದು ಮೊದಲು ನನಗೆ ಸಿಕ್ಕಾಗ ಅದರ ಚೀಲದಲ್ಲಿ ಪಕ್ಷಿಯೊಂದರ ಅಳಿದುಳಿದ ಚೂರುಗಳಿದ್ದವು."

"ಅಯ್ಯೋ ದೇವರೆ", ಅಭಿ ನಡುಗಿದ. "ಈಗ ಅದಕ್ಕೆ ಏನು ಆಹಾರ?" ಮೊದಲು ಹೆಚ್ಚು ಆಸಕ್ತಿ ಇಲ್ಲದಿದ್ದ ಅವನ ರೀತಿ ಈಗ ಭಯಕ್ಕೆ ತಿರುಗುತ್ತಿತ್ತು.

"ಜಿರಳೆಗಳು, ಚಿಟ್ಟೆಗಳು, ಕಂಬಳಿ ಹುಳುಗಳು ಇಂಥವೆಲ್ಲ. ಒಂದು ಸಲ ಬೋನಿನಲ್ಲಿ ಬಿದ್ದಿದ್ದ ಇಲಿಯನ್ನ ಅದಕ್ಕೆ ಕೊಟ್ಟೆ. ಅದೂ ಅಡ್ಡಿ ಏನೂ ತೋರಿಸಲಿಲ್ಲ, ಆದರೆ ಅತೀ ತಿನ್ನುವುದೂ ಇವಕ್ಕೆ ಅಪಾಯಕಾರಿ ಆಗಬಹುದು. ಈ ಗಿಡಗಳಿಗೆ ಅತಿ ಆಸೆ, ತಮ್ಮ ಸಹಜವಾದ ಮಿತಿ ಅವಕ್ಕೆ ಗೊತ್ತಿಲ್ಲ."

ನಮ್ಮ ಆಸಕ್ತಿ ಏರುತ್ತಿದ್ದಂತೆ ನಾವು ಒಂದು ಗಾಜಿನ ಗೂಡಿನಿಂದ ಮತ್ತೊಂದರ ಹತ್ತಿರ ಹೋದೆವು. ಬಟರ್‌ವಾರ್ಟ್, ಸನ್‌ಡ್ಯೂ, ಬ್ಲಾಡರ್‌ವಾರ್ಟ್ ಈ ಹೆಸರಿನ ಗಿಡಗಳ ಚಿತ್ರಗಳನ್ನ ನೋಡಿದ್ದೆ, ಅದರಿಂದ ಗುರುತಿಸಿದೆ. ಆದರೆ ಉಳಿದವು ತೀರ ಅಚರಿಚಿತ, ಅಲ್ಲದೆ ನಂಬುವುದಕ್ಕೆ ಸಾಧ್ಯವಿರಲಿಲ್ಲ. ಕಂಠಿ ಬಾಬು ಹತ್ತಿರ ಇಪ್ಪತ್ತು ಬಗೆಯ ಮಾಂಸಾಹಾರಿ ಗಿಡಗಳಿದ್ದವು. ಅವುಗಳಲ್ಲಿ ಕೆಲವು ಜಗತ್ತಿನಲ್ಲಿ ಬೇರೆ ಯಾರ ಸಂಗ್ರಹದಲ್ಲಿಯೂ ಇರಲಿಲ್ಲ.

ಇವುಗಳಲ್ಲಿ ತುಂಬಾ ಸೊಗಸಾಗಿದ್ದದ್ದು ಸನ್‌ಡ್ಯೂ ಅದರ ಎಲೆಯ ತುಪ್ಪುಗಳಂತಹ ಬಂಧದ ಸುತ್ತ ಥಳಥಳ ಹೊಳೆಯುತ್ತಿದ್ದ ನೀರಿನ ಹನಿಗಳಿದ್ದವು. ಕಂಠಿ ಬಾಬು ಒಂದು ಯಾಲಕ್ಕಿ ಕಾಳಿನ ಗಾತ್ರದ ಮಾಂಸದ ತುಂಡನ್ನು ತೆಗೆದುಕೊಂಡು ಅದನ್ನು ಒಂದು ದಾರದ ತುಂಡಿಗೆ ಕಟ್ಟಿದರು. ಅವರು ನಿಧಾನವಾಗಿ ದಾರವನ್ನು ಎಲೆಯತ್ತ ಇಳಿಬಿಟ್ಟಾಗ ಎಲೆಯ ಮೇಲಿನ ಕೂದಲು ಅತ್ಯಾಸೆಯಿಂದ ಮಾಂಸದತ್ತ ಎದ್ದು ನಿಂತದ್ದನ್ನು ಬರಿಯ ಕಣ್ಣಿನಿಂದಲೇ ನಾವು ಕಂಡೆವು.

ಕಂಠಿ ಬಾಬು ದಾರವನ್ನು ಹೊರಕ್ಕೆ ಎಳೆದುಕೊಂಡುಬಿಟ್ಟರು. ಅದನ್ನು ಇನ್ನೂ ಕೆಳಕ್ಕೆ ಇಳಿಸಿದ್ದರೆ ನೊಣದ ಜಾಲದಂತೆಯೇ ಎಲೆ ಅದನ್ನು ಸೆಳೆದುಕೊಳ್ಳುತ್ತಿತ್ತು. ಅದರಿಂದ ಸತ್ವವನ್ನೆಲ್ಲ ಹೀರಿಕೊಂಡು ಉಳಿದುದನ್ನು ಎಸೆದುಬಿಡುತ್ತಿತ್ತು ಎಂದು ವಿವರಿಸಿದರು. "ನೀವು ಅಥವಾ ನಾನು ತಿನ್ನುವ ರೀತಿಗಿಂತ ಹೆಚ್ಚೇನೂ ವ್ಯತ್ಯಾಸ ಇಲ್ಲವೆನ್ನುತ್ತೀರಿ?"

ನಾವು ಷೆಡ್‌ನಿಂದ ಹೊರಕ್ಕೆ ತೋಟಕ್ಕೆ ಬಂದೆವು. ಶಿರೀಷ್ ಗಿಡದ ನೆರಳು ಹುಲ್ಲಿನ ಮೇಲೆ ಉದ್ದವಾಗಿ ಚಾಚಿತ್ತು. ಮಧ್ಯಾಹ್ನ ನಾಲ್ಕು ಗಂಟೆ.

ಕಂಠಿ ಬಾಬು ಮುಂದೆ ಹೇಳಿದರು, "ಇವುಗಳಲ್ಲಿ ಬಹು ಮಾದರಿಗಳನ್ನು ಕುರಿತು ಬರೆದಿದ್ದಾರೆ. ಆದರೆ ನನ್ನ ಸಂಗ್ರಹದ ಅತ್ಯಂತ ವಿಚಿತ್ರ ಮಾದರಿಯನ್ನು ಕುರಿತು ನಾನು ಬರೆಯದಿದ್ದರೆ ಅದರ ಹೆಸರೇ ದಾಖಲಾ ಗುವುದಿಲ್ಲ. ನೀವು ಈಗ ನೋಡಬೇಕಾದ ಮಾದರಿ ಅದೇ. ಆಗ ನಿಮಗೆ ಗೊತ್ತಾಗುತ್ತದೆ ನಿಮಗೆ ಇವತ್ತು ಬರಲು ಏಕೆ ಹೇಳಿದೆ ಎನ್ನುವುದು. ಬನ್ನಿ ಪರಿಮಳ್, ಬನ್ನಿ ಅಭಿಜಿತ್ ಬಾಬು".

ಅವರನ್ನು ಹಿಂಬಾಲಿಸಿ, ಕಾರ್ಖಾನೆಯಂತೆ ಕಾಣುತ್ತಿದ್ದ ಷೆಡ್ ಕಡೆಗೆ ಹೋದೆವು. ಬೀಗಹಾಕಿದ್ದ ಲೋಹದ ಬಾಗಿಲಿನ ಎರಡೂ ಕಡೆ ಎರಡು ಕಿಟಕಿಗಳಿದ್ದವು. ಕಂಠಿ ಬಾಬು ಒಂದು ಕಿಟಕಿಯನ್ನು ತೆರೆದು ಇಣಿಕಿ ನೋಡಿದರು. ಅನಂತರ ನಮ್ಮನ್ನು ಹತ್ತಿರ ಹೋಗಿ ನೋಡಲು ಹೇಳಿದರು. ಅಭಿ ಮತ್ತು ನಾನು ಕಿಟಕಿಯ ಮೇಲೆ ಬಾಗಿದೆವು.

ಕೊಠಡಿಯ ಪಶ್ಚಿಮದ ಗೋಡೆಯಲ್ಲಿ ಚಾವಣಿಯ ಹತ್ತಿರ ಎರಡು ಗವಾಕ್ಷಿಗಳಿದ್ದವು. ಅವುಗಳ ಗಾಜಿನ ಮೂಲಕ ಒಳಕ್ಕೆ ಸ್ವಲ್ಪ ಬೆಳಕು ಬಂದು ಆ ಸ್ಥಳವನ್ನು ಸ್ವಲ್ಪಮಟ್ಟಿಗೆ ಬೆಳಕುಮಾಡಿತ್ತು. ಅದರೊಳಗಿದ್ದದ್ದು ಗಿಡದಂತೆ ಕಾಣುತ್ತಲೇ ಇರಲಿಲ್ಲ. ಹಲವು ದಪ್ಪ ಸ್ಪರ್ಶಾಂಗಗಳಿರುವ ಒಂದು ಪ್ರಾಣಿಯನ್ನು ಅದು ಹೋಲುತ್ತಿತ್ತು. ಗಿಡದ ಕಾಂಡ ಸುಮಾರು ಎಂಟು-ಹತ್ತು ಅಡಿಗಳವರೆಗೆ ಇದ್ದುದನ್ನು ನಿಧಾನವಾಗಿ ಕಾಣಲು ನಮಗೆ ಸಾಧ್ಯವಾಯಿತು. ಕಾಂಡದ ಮೇಲಿಂದ ಸುಮಾರು ಒಂದು ಅಡಿ ಕೆಳಗಿನಿಂದ ಮತ್ತು ಅದರ ಸುತ್ತ ಸ್ಪರ್ಶಾಂಗಗಳು ಹೊರ ಬಂದಿದ್ದವು. ನಾನು ಏಳು ಸ್ಪರ್ಶಾಂಗಗಳನ್ನು ಎಣಿಸಿದೆ. ಕಾಂಡವು ಕಾಂತಿಹೀನವಾಗಿತ್ತು, ನಯವಾಗಿತ್ತು, ಅದರ ಮೇಲೆಲ್ಲ ಕಂದು ಚುಕ್ಕೆಗಳಿದ್ದವು. ಈಗ ಸ್ಪರ್ಶಾಂಗಗಳು ನೇತುಬಿದ್ದಿದ್ದು ಜೀವರಹಿತವಾಗಿ ಕಾಣುತ್ತಿದ್ದವು. ಆದರೆ ಅವನ್ನು ನೋಡಿದಾಗ ನನ್ನ ಬೆನ್ನುಮೂಳೆಯೆಲ್ಲ ಚಳಿಚಳಿಯಾಯಿತು. ಆ ಅರೆಬೆಳಕಿಗೆ ಕಣ್ಣು ಹೊಂದಿ ಕೊಂಡಂತೆ ನಾವು ಇನ್ನೊಂದು ಸಂಗತಿಯನ್ನು ಗಮನಿಸಿದೆವು. ಕೊಠಡಿಯ ನೆಲದ ಮೇಲೆಲ್ಲ ಗರಿಗಳು ಹರಡಿದ್ದವು.

ಎಷ್ಟು ಕಾಲ ನಿಶ್ಚೇಷ್ಟಿತರಾಗಿ ನಿಂತಿದ್ದೆವೋ ಕಾಣೆ. ಕಡೆಗೆ ಕಂಠಿ ಬಾಬು ಹೇಳಿದರು, "ಈಗ ಮರ ನಿದ್ರೆಮಾಡುತ್ತಿದೆ, ಆದರೆ ಇನ್ನೇನು ಏಳುವ ಸಮಯ".

ಅಭಿ ಅಪನಂಬಿಕೆಯ ದನಿಯಲ್ಲಿ ಕೇಳಿದ, "ಅದು ನಿಜವಾಗಿ ಮರವಲ್ಲ, ಅಲ್ಲವೆ?"

"ಅದು ನೆಲದ ಮೇಲೆ ಬೆಳೆಯುವುದರಿಂದ ಅದನ್ನು ಬೇರೆ ಏನೆಂದು ಕರೆಯುವುದು? ಆದರೆ ಅದು ಬಹುಮಟ್ಟಿಗೆ ಮರದಂತೆ ವರ್ತಿಸುವುದಿಲ್ಲ ಅಂತ ನಾನು ಹೇಳಬೇಕು. ಅದಕ್ಕೆ ನಿಘಂಟಿನಲ್ಲಿ ಹೆಸರೇ ಇಲ್ಲ"

"ನೀವು ಅದಕ್ಕೆ ಏನು ಹೆಸರು ಕೊಟ್ಟಿದ್ದೀರಿ?"

"ಸೆಪ್ಟೊಪಸ್. ಬಂಗಾಳಿಯಲ್ಲಿ 'ಸಪ್ತಪಾಶ್' ಎನ್ನಬಹುದು. 'ಪಾಶ್' ಎಂದರೆ 'ನಾಗಪಾಶ್' ಎಂದ ಹಾಗೆ, ಒಂದು ಸುತ್ತು ಅಥವಾ ಗಂಟು".

ನಾವು ಮನೆಗೆ ಹಿಂದಕ್ಕೆ ಹೋಗುತ್ತಿದ್ದಾಗ ನಾನು ಅವರನ್ನು ಈ ಮಾದರಿ ಎಲ್ಲಿ ಸಿಕ್ಕಿತು ಎಂದು ಕೇಳಿದೆ.

"ಮಧ್ಯ ಅಮೆರಿಕದಲ್ಲಿ ನಿಕರಾಗುಅ ಸರೋವರದ ಹತ್ತಿರ ಒಂದು ನಟ್ಟಡವಿಯಲ್ಲಿ"

"ಅದನ್ನು ಹುಡುಕಲು ಬಹಳ ಕಷ್ಟಪಡಬೇಕಾಯಿತೇನು?"

"ಅದು ಆ ಪ್ರದೇಶದಲ್ಲಿ ಬೆಳೆಯುತ್ತದೆ ಅಂತ ನನಗೆ ಗೊತ್ತಿತ್ತು. ನೀವು ಪ್ರೊಫೆಸರ್ ಡಂಕನ್‌ರ ಹೆಸರನ್ನು ಕೇಳಿರಬಹುದು. ಮಧ್ಯ ಅಮೆರಿಕದಲ್ಲಿ ಅಪರೂಪದ ಸಸ್ಯಗಳನ್ನು ಹುಡುಕುವುದರಲ್ಲಿ ಪ್ರಾಣ ಕಳೆದುಕೊಂಡರು ಅವರು. ಅವರ ಹೆಣ ಸಿಕ್ಕಲೇ ಇಲ್ಲ, ಅವರು ಹೇಗೆ ಸತ್ತರು ಅಂತ ಯಾರಿಗೂ ಖಚಿತವಾಗಿ ತಿಳಿಯದು. ಅವರ ದಿನಚರಿ ಪುಸ್ತಕಕ್ಕೆ ಕಡೆಯ ಪುಟಗಳಲ್ಲಿ ಈ ಗಿಡದ ಪ್ರಸ್ತಾಪವಿದೆ.

"ನಾನು ನಿಕರಾಗುಅಕ್ಕೆ ಹೋಗಲು ಸಿಕ್ಕ ಮೊದಲ ಅವಕಾಶವನ್ನೆ ಬಳಸಿಕೊಂಡೆ. ಗೌಟಮಾಲದಿಂದ ಆಚೆ ಎಲ್ಲ ಜನ ಈ ಗಿಡದ ವಿಷಯ ಮಾತನಾಡುತ್ತಿದ್ದುದು ನನ್ನ ಕಿವಿಗೆ ಬೀಳುತ್ತಿತ್ತು, ಅವರು ಇದನ್ನ ಸೇಟನ್ ಮರ ಎಂದು ಕರೆಯುತ್ತಿದ್ದರು, ದೆವ್ವದ ಮರ ಎನ್ನಬಹುದು. ಆಮೇಲೆ ಕೆಲವು ಮರಗಳನ್ನ ನಾನೂ ನೋಡಿದೆ, ಕೆಲವು ಮರಗಳು ಕೋತಿಗಳನ್ನೂ ಆರ್ಮಡಿಲ್ಲೊ ಎನ್ನುವ ಪ್ರಾಣಿಗಳನ್ನೂ ತಿನ್ನುವುದನ್ನ ನೋಡಿದೆ.

ಬಹಳ ಹುಡುಕಾಡಿದ ಮೇಲೆ ನನ್ನ ಜೊತೆಗೆ ತರಲು ಸಾಧ್ಯವಾಗುವಷ್ಟು ಪುಟ್ಟ ಗಿಡವೊಂದು ಸಿಕ್ಕಿತು. ಎರಡು ವರ್ಷಗಳಲ್ಲಿ ಹೇಗೆ ಬೆಳೆದಿದೆ ನೋಡಿ."

"ಈಗ ಅದು ಏನನ್ನ ತಿನ್ನತ್ತೆ?"

"ನಾನು ಏನು ಕೊಟ್ಟರೆ ಅದನ್ನ ತಿನ್ನತ್ತೆ. ಅದಕ್ಕೋಸ್ಕರ ನಾನು ಕೆಲವು ಸಲ ಬೋನಿನಲ್ಲಿ ಇಲಿಗಳನ್ನು ಹಿಡಿದಿದ್ದೇನೆ. ಕಾರಿಗೆ ಸಿಕ್ಕಿ ಸತ್ತ ನಾಯಿ ಅಥವಾ ಬೆಕ್ಕನ್ನ ಕಂಡರೆ ಗಿಡಕ್ಕೋಸ್ಕರ ತರಬೇಕು ಅಂತ ಪ್ರಯಾಗ್‌ಗೆ ಹೇಳಿದ್ದೇನೆ, ಅವನ್ನು ಅದು ಅರಗಿಸಿಕೊಂಡಿದೆ. ನಾನು, ನೀವು ತಿನ್ನುವ ಎಲ್ಲ ಮಾಂಸವನ್ನೂ, ಕೋಳಿ ಮರಿ, ಮೇಕೆ ಎಲ್ಲವನ್ನೂ ಅದಕ್ಕೆ ಕೊಟ್ಟಿದ್ದೇನೆ. ಆದರೆ ಈಚೆಗೆ ಅದರ ಹಸಿವು ಎಷ್ಟು ಹೆಚ್ಚಿದೆ ಎಂದರೆ ಅದನ್ನ ತೃಪ್ತಿಪಡಿಸೋದಕ್ಕೆ ನನ್ನಿಂದ ಸಾಧ್ಯವಿಲ್ಲ. ಸುಮಾರು ಈ ಹೊತ್ತಿಗೆ ಅದಕ್ಕೆ ಎಚ್ಚರವಾದಾಗ ಅದು ತಳಮಳಸ್ತ್ ಇರತ್ತೆ, ಸಮಾಧಾನವೇ ಇರೋದಿಲ್ಲ. ನಿನ್ನೆ ಒಂದು ಅಪಘಾತವೇ ಆಗೋದ್ರಲ್ಲಿತ್ತು. ಅದಕ್ಕೆ ಕೋಳಿ ಮರಿಯನ್ನ ತಿನ್ನಿಸೋದಕ್ಕೆ ಪ್ರಯಾಗ್ ಕೊಠಡಿಯೊಳಗೆ ಹೋಗಿದ್ದ. ಅದಕ್ಕೆ ಆಹಾರ ತಿನ್ನಿಸೋದು ಆನೆಗೆ ತಿನ್ನಿಸಿದ ಹಾಗೆ. ಮೊದಲು ಕಾಂಡದ ಮೇಲ್ಭಾಗದಲ್ಲಿ ಒಂದು ಮುಚ್ಚಳ ತೆರೆದುಕೊಳ್ಳತ್ತೆ. ಅದರ ಒಂದು ಸ್ಪರ್ಶಾಂಗದಿಂದ ಆಹಾರವನ್ನು ಮೇಲಕ್ಕೆ ಎತ್ತಿಕೊಂಡು ಅದನ್ನ ಮೇಲಿರುವ ತೂತಿನಲ್ಲಿ ಇಟ್ಟುಕೊಳ್ಳತ್ತೆ. ಪ್ರತಿಸಲ ಒಂದಿಷ್ಟು ಆಹಾರವನ್ನು ಒಳಕ್ಕೆ ಇಟ್ಟುಕೊಂಡಾಗಲೂ ಸೆಪ್ಟೊಪಸ್ ಸ್ವಲ್ಪ ಹೊತ್ತು ಸುಮ್ಮನಿರುತ್ತೆ. ಸ್ವಲ್ಪ ಹೊತ್ತಿನನಂತರ ಅದು ಮತ್ತೆ ಸ್ಪರ್ಶಾಂಗವನ್ನ ಅಲ್ಲಾಡಿಸುವುದಕ್ಕೆ ಪ್ರಾರಂಭಮಾಡಿದರೆ ಅದಕ್ಕೆ ಇನ್ನೂ ಹಸಿವು ಅಂತ ಅರ್ಥ.

"ಇದುವರೆಗೆ ಸೆಪ್ಟೊಪಸ್‌ಗೆ ದಿನಕ್ಕೆ ಎರಡು ಕೋಳಿಮರಿಗಳು ಅಥವಾ ಒಂದು ಸಣ್ಣ ಆಡು ಸಾಕಾಗ್ತಾ ಇತ್ತು. ನಿನ್ನೆಯಿಂದ ಏನೋ ಬದಲಾವಣೆ ಆದ ಹಾಗೆ ಕಾಣುತ್ತೆ. ಎರಡನೆ ಕೋಳಿಮರಿ ಕೊಟ್ಟು ಮಾಮೂಲಿನಂತೆ ಪ್ರಯಾಗ್ ಹೊರಕ್ಕೆ ಬಂದ. ಸ್ಪರ್ಶಾಂಗಗಳನ್ನು ಹಲ್ಲು ಕಡಿದ ಹಾಗೆ ಇನ್ನೂ ಕಡಿಯುವ ಶಬ್ದ ಕೇಳಿ ಏನು ವಿಷಯ ಅಂತ ನೋಡುವುದಕ್ಕೆ ಒಳಕ್ಕೆ ಹೋದ.

"ನಾನು ದಿನಚರಿ ಬರೀತಾ ನನ್ನ ಕೊಠಡಿಯಲ್ಲಿದ್ದೆ. ಇದ್ದಕ್ಕಿದ್ದ ಹಾಗೆ ಕಿರುಚಿಕೊಂಡ ಶಬ್ದ ಕೇಳಿದಾಗ ನಾನು ಅಲ್ಲಿಗೆ ಧಾವಿಸಿದೆ. ನಾನು ಕಂಡದ್ದು ಒಂದು ಭಯಂಕರ ನೋಟ. ಸೆಪ್ಟೊಪಸ್‌ನ ಒಂದು ಸ್ಪರ್ಶಾಂಗ ಪ್ರಯಾಗ್‌ನ ಬಲಗೈಯನ್ನು ತಿರುಚಿ ಹಿಡಿದುಕೊಳ್ಳುವ ಹಾಗೆ ಬಿಗಿಯಾಗಿ ಹಿಡಿದುಕೊಂಡಿತ್ತು, ಪ್ರಯಾಗ್ ತನ್ನ ಬಲವನ್ನೆಲ್ಲ ಪ್ರಯೋಗಿಸಿ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಇನ್ನೊಂದು ಕಡೆಯಿಂದ ಒಂದು ಸ್ಪರ್ಶಾಂಗ ಅವನನ್ನ ಹಿಡಿದುಕೊಳ್ಳಲು ಕೆಟ್ಟ ಆಸೆಯಿಂದ ಅವನ ಹತ್ತಿರ ಸರಿಯುತ್ತಿತ್ತು.

"ಸ್ವಲ್ಪವೂ ತಡಮಾಡದೆ ನಾನು ನನ್ನ ಕೋಲಿನಿಂದ ಸ್ಪರ್ಶಾಂಗಕ್ಕೆ ಹೊಡೆದೆ. ಆಮೇಲೆ ಪ್ರಯಾಗ್‌ನನ್ನು ಎರಡು ಕೈಗಳಿಂದ ಎಳೆದುಹಾಕಿ ಉಳಿಸಿದೆ, ಇನ್ನು ಸ್ವಲ್ಪ ತಡವಾಗಿದ್ರೆ ಅವನು ಉಳೀತಾಲೇ ಇರಲಿಲ್ಲ. ನನಗೆ ತುಂಬ ಚಿಂತೆಯಾಗಿರೋ ವಿಷಯ ಅಂದರೆ ಸೆಪ್ಟೊಪಸ್ ಪ್ರಯಾಗ್‌ನ ಮಾಂಸದ ಒಂದು ಚೂರನ್ನ ಕಿತ್ತುಬಿಟ್ಟಿತು. ಅದನ್ನು ಅದರ ಬಾಯಿಯಲ್ಲಿ ಹಾಕಿಕೊಂಡಿದ್ದನ್ನ ನಾನೇ ನೋಡಿದೆ."

ನಾವು ವರಾಂಡ ತಲುಪಿದ್ದೆವು. ಕಂಠಿ ಬಾಬು ಕುಳಿತುಕೊಂಡು ತಮ್ಮ ಹಣೆಯನ್ನು ಒರೆಸಿಕೊಳ್ಳುವುದಕ್ಕೆ ಒಂದು ಕರವಸ್ತ್ರ ಹೊರಕ್ಕೆ ತೆಗೆದರು.

"ಸೆಪ್ಟೊಪಸ್‌ಗೆ ಮನುಷ್ಯರ ಮಾಂಸದಲ್ಲೂ ಆಕರ್ಷಣೆ ಇದೆ ಅಂತ ನಾನು ಅರ್ಥ ಮಾಡಿಕೊಂಡೇ ಇರಲಿಲ್ಲ. ಅದು ಅತಿ ಆಸೆ ಇರಬಹುದು ಅಥವಾ ದುಷ್ಟತನ ಇರಬಹುದು. ಆದರೆ ನಿನ್ನೆ ನಾನು ಆ ದೃಶ್ಯ ನೋಡಿದ ಮೇಲೆ ಅದನ್ನು ಕೊಲ್ಲದೆ ಬೇರೆ ದಾರಿಯೇ ಇಲ್ಲ. ನಿನ್ನೆ ನಾನು ಅದರ ಆಹಾರಕ್ಕೆ ವಿಷ ಹಾಕಿ ನೋಡಿದೆ, ಆದರೆ ಅದಕ್ಕೆ ಬಹಳ ಬುದ್ಧಿ. ಅದು ಆಹಾರಾನ ಸ್ಪರ್ಶಾಂಗದಲ್ಲಿ ಮುಟ್ಟಿ ಬಿಸಾಕಿಬಿಡ್ತು. ಇರೋ ಒಂದೇ ದಾರಿ ಅದಕ್ಕೆ ಗುಂಡಿಟ್ಟು ಕೊಲ್ಲೋದು. ಪರಿಮಳ್, ಈಗ ನಿನಗೆ ಗೊತ್ತಾಯ್ತಲ್ಲ ನಾನು ನಿನ್ನನ್ನ ಯಾಕೆ ಬರಹೇಳಿದೆ ಅಂತ."

ನಾನು ಇದನ್ನ ಸ್ವಲ್ಪ ಹೊತ್ತು ಯೋಚಿಸಿದೆ. "ಅದು ಗುಂಡಿನೇಟಿಗೆ ಸಾಯುತ್ತೆ ಅನ್ನೋದು ಖಂಡಿತವೆ?"

"ಅದು ಸಾಯೋ ವಿಷಯ ನನಗೆ ಗೊತ್ತಿಲ್ಲ. ಆದರೆ ಅದಕ್ಕೆ ಮಿದುಳಿದೆ ಅನ್ನೋದು ನನಗೆ ಸ್ವಲ್ಪ ಹೆಚ್ಚುಕಡಿಮೆ ಖಂಡಿತವೇ. ಅದು ಯೋಚನೆ ಮಾಡಬಲ್ಲುದು ಅನ್ನೋದಕ್ಕೆ ಸಾಕಷ್ಟು ಸಾಕ್ಷ್ಯ ಇದೆ. ನಾನು ಎಷ್ಟೋ ಸಲ ಅದರ ಹತ್ತಿರ ಹೋಗಿದ್ದೇನೆ, ಆದರೆ ಅದು ನನ್ನ ತಂಟೆಗೆ ಬಂದಿಲ್ಲ. ನಾಯಿಗೆ ಯಜಮಾನ ಗೊತ್ತಿರುವ ಹಾಗೆ ನಾನು ಅದಕ್ಕೆ ಗೊತ್ತು. ಅದು ಪ್ರಯಾಗ್ ಮೇಲೆ ಹಲ್ಲೆ ಮಾಡಿದ್ದಕ್ಕೆ ಒಂದು ಕಾರಣ ಇರಬಹುದು. ನೋಡಿ, ಪ್ರಯಾಗ್ ಒಂದೊಂದು ಸಲ ಸೆಪ್ಟೊಪಸ್‌ನ ರೇಗಿಸೋದಕ್ಕೆ ಪ್ರಯತ್ನ ಮಾಡ್ತಾನೆ. ಅದರ ಹತ್ತಿರ ಆಹಾರ ತಗೊಂಡು ಹೋಗಿ ಆಸೆ ತೋರಿಸಿ ಕೊಡದೆ ಇರೋದು ಅಥವಾ ಆಹಾರವನ್ನ ಅದರ ಸ್ಪರ್ಶಾಂಗಕ್ಕೆ ಬಹಳ ಹತ್ತಿರ ಹಿಡಿದು ಹಿಂದಕ್ಕೆ ತಗೊಂಡು ತಮಾಷೆ ನೋಡೋದು ಎಲ್ಲ ಮಾಡ್ತಾನೆ. ಅದಕ್ಕೆ ಮಿದುಳಿದೆ, ಮಿದುಳು ಎಲ್ಲಿರಬೇಕೋ ಅಲ್ಲೇ ಇದೆ, ಎಂದರೆ ತಲೇಲಿ ಸುತ್ತ ಸ್ಪರ್ಶಾಂಗಗಳು ಬೆಳೆದುಕೊಂಡಿರೋ ಕಾಂಡದ ಭಾಗದ ಸುತ್ತ. ನೀವು ಗುಂಡು ಹೊಡೆಯಬೇಕಾದ್ದು ಅಲ್ಲಿಗೆ."

ಅಭಿಜಿತ್ ಕೂಡಲೇ ಮಧ್ಯೆ ಬಾಯಿಹಾಕಿದ, "ಅದು ಸುಲಭ. ಒಂದು ನಿಮಿಷದಲ್ಲಿ ಕಂಡುಹಿಡೀಬಹುದು. ಪರಿಮಳ್, ನಿನ್ನ ತುಪಾಕಿ ತೆಗೆದುಕೊ".

ಕಂಠಿ ಬಾಬು ಅವನನ್ನು ತಡೆಯಲು ಕೈ ಎತ್ತಿದರು. "ಬಲಿಯು ನಿದ್ರೆ ಮಾಡುತ್ತಿರುವಾಗ ಗುಂಡು ಹೊಡೆಯುತ್ತಾರೇನು? ಪರಿಮಳ್, ಬೇಟೆಯ ಸಂಹಿತೆ ಏನು ಹೇಳುತ್ತದೆ?"

"ಮಲಗಿರುವ ಪ್ರಾಣಿಗೆ ಗುಂಡುಹೊಡೆಯುವುದು ಎಲ್ಲ ನೀತಿನಿಯಮಕ್ಕೆ ವಿರುದ್ಧ. ಅದೂ ಬಲಿ ಚಲಿಸುವುದಕ್ಕೆ ಸಾಧ್ಯವಿಲ್ಲದೆ ಇರುವಾಗ ಆ ಪ್ರಶ್ನೆಯೇ ಇಲ್ಲ."

ಕಂಠಿ ಬಾಬು ಫ್ಲಾಸ್ಕನ್ನು ಹಿಂದಕ್ಕೆ ತಂದು ನಮಗೆ ಟೀ ಕೊಟ್ಟರು. ನಾವು ಟೀ ಕುಡಿದು ಮುಗಿಸಿದ ಹದಿನೈದು ನಿಮಿಷಗಳ ನಂತರ ಸೆಪ್ಟೊಪಸ್‌ಗೆ ಎಚ್ಚರವಾಯಿತು.

ಮುಂದುಗಡೆ ಕೊಠಡಿಯಲ್ಲಿ ಬಾದ್‌ಷಾ ಸ್ವಲ್ಪ ಹೊತ್ತಿನಿಂದ ಚಡಪಡಿಸುತ್ತಿತ್ತು. ಆದರೆ ಈಗ ಥಟ್ಟನೆ ಕೇಳಿದ ಸ್ವಿಷ್ ಎನ್ನುವ ಶಬ್ದ ಅನಂತರ ಕುಂಯ್ ಕುಂಯ್ ಅಳು ಕೇಳಿ ಅಭಿ ಮತ್ತು ನಾನು ಏನು ವಿಷಯ ಎಂದು ನೋಡಲು ಅಲ್ಲಿಗೆ ಧಾವಿಸಿದೆವು. ಬಾದ್‌ಷಾ ಸರಪಳಿಯಿಂದ ಬಿಡಿಸಿಕೊಳ್ಳಲು ಸರ್ವಪ್ರಯತ್ನ ಮಾಡುತ್ತಿತ್ತು. ಅಭಿ ಗಟ್ಟಿಯಾಗಿ ಕೂಗಿ ಹೇಳಿ ಅದನ್ನು ತಡೆಯಲು ಪ್ರಯತ್ನಿಸಿದ ಆ ಹೊತ್ತಿಗೆ ಸರಿಯಾಗಿ ಒಂದು ವಿಚಿತ್ರ ವಾಸನೆ ಗಾಳಿಯನ್ನು ತುಂಬಿಬಿಟ್ಟಿತು. ವಾಸನೆಯೂ ಸದೆಬಡಿಯುವ ಗಟ್ಟಿ ಶಬ್ದವೂ ಟಿನ್‌ಷೆಡ್ ಕಡೆಯಿಂದ ಬರುತ್ತಿದ್ದ ಹಾಗೆ ಕಂಡಿತು.

ಆ ವಾಸನೆಯನ್ನು ವರ್ಣಿಸುವುದು ಕಷ್ಟ. ನನ್ನ ಬಾಲ್ಯದಲ್ಲಿ ಟಾನ್‌ಸಿಲ್ಸ್ ತೆಗೆಸಲು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬೇಕಾಯಿತು. ಶಸ್ತ್ರಚಿಕಿತ್ಸೆ ಮಾಡಿದಾಗ ನನಗೆ ಕೊಟ್ಟ ಕ್ಲೋರೋಫಾರಂನ ನೆನಪು ಬಂತು ಆ ವಾಸನೆಯಿಂದ. ಕಂಠಿಬಾಬು ಕೊಠಡಿಯೊಳಕ್ಕೆ ಸರಸರನೆ ಬಂದರು. "ಬಸ್ಸಿ, ವೇಳೆಯಾಯಿತು".

"ಅದೇನು ವಾಸನೆ?" ನಾನು ಕೇಳಿದೆ.

"ಸೆಪ್ಟೊಪಸ್‌ದು. ಆಹಾರವನ್ನು ಆಕರ್ಷಿಸೋದಕ್ಕೆ ಅವು ಹೊರಕ್ಕೆ ಕಳಿಸುವ ವಾಸನೆ ಇದು...."

ಅವರ ಮಾತು ಮುಗಿಯುವ ಮೊದಲೇ ಬಾದ್‌ಷಾ ಬಲವನ್ನೆಲ್ಲ ಪ್ರಯೋಗಿಸಿ ಅದರ ಕುತ್ತಿಗೆಯ ಕಾಲರನ್ನು ಕಿತ್ತು ಹಾಕಿತು. ಕಂಠಿ ಬಾಬುವನ್ನು ನೆಲಕ್ಕೆ ಬೀಳಿಸಿ ವಾಸನೆ ಬರುತ್ತಿದ್ದ ಕಡೆಗೆ ಓಡಿತು.

'ಅನಾಹುತವಾಯಿತು' ಎಂದು ಕೂಗುತ್ತಾ ಅಭಿ ನಾಯಿಯ ಹಿಂದೆ ಓಡಿದ.

ನನ್ನ ತುಪಾಕಿಗೆ ತೋಟಾ ಹಾಕಿ ಕೆಲವೇ ಸೆಕೆಂಡುಗಳ ನಂತರ ನಾನು ಟಿನ್‌ಷೆಡ್ ತಲುಪಿದಾಗ, ಅಭಿ ಅದನ್ನು ತಡೆಯಲು ಪ್ರಯತ್ನಿಸುತ್ತಿದ್ದರೂ ಬಾದ್‌ಷಾ ಕಿಟಕಿಯ ಮೂಲಕ ಕಣ್ಮರೆಯಾದದ್ದನ್ನು ನೋಡಿದೆ. ಕಂಠಿ ಬಾಬು ಬೀಗ ಹಾಕಿದ್ದ ಬಾಗಿಲನ್ನು ತೆರೆಯುತ್ತಿದ್ದಂತೆ ನಮಗೆ ರಾಮ್‌ಪುರದ ಬೇಟೆಯ ನಾಯಿಯ ಸಾವಿನ ಚೀತ್ಕಾರ ಕೇಳಿಸಿತು. ಒಳಕ್ಕೆ ನುಗ್ಗಿದಾಗ ಬಾದ್‌ಷಾನನ್ನು ಹಿಡಿದುಕೊಳ್ಳಲು ಒಂದು ಸ್ಪರ್ಶಾಂಗಕ್ಕೆ ಆಗುತ್ತಿರಲಿಲ್ಲ ಎನ್ನುವುದು ಕಂಡಿತು. ಮೊದಲು ಒಂದು ಸ್ಪರ್ಶಾಂಗದಿಂದ, ಅನಂತರ ಇನ್ನೊಂದರಿಂದ,

ಆಮೇಲೆ ಮತ್ತೊಂದರಿಂದ ಸೆಫ್ಲೊಪಸ್ ಬಾದ್‌ಷಾನನ್ನು ಒಂದು ಮೃತ್ಯು ಆಲಿಂಗನದಲ್ಲಿ ಸಿಕ್ಕಿಸಿ ಕೊಳ್ಳುತ್ತಿತ್ತು.

ಕಂಠಿ ನಮಗೆ ಕೂಗಿ ಹೇಳಿದರು. "ಒಂದು ಹೆಜ್ಜೆ ಮುಂದಿಡಬೇಡಿ, ಪರಿಮಳ್ ತುಪಾಕಿ ಹಾರಿಸಿ."

ನಾನು ಗುರಿ ಇಡಬೇಕೆನ್ನುವಷ್ಟರಲ್ಲಿ ಅಭಿಜಿತ್ ನನ್ನನ್ನ ತಡೆದ. ಅವನ ನಾಯಿಯಲ್ಲಿ ಅವನಿಗೆ ಎಷ್ಟು ಪ್ರೀತಿ ಎಂದು ನನಗೆ ಅರ್ಥವಾಯಿತು. ಕಂಠಿ ಬಾಬುವಿನ ಎಚ್ಚರಿಕೆಗೆ ಗಮನವನ್ನೇ ಕೊಡದ್ದೆ ಅವನು ಸೆಫ್ಲೊಪಸ್ ಕಡೆಗೆ ಸಾಗಿದ, ಬಾದ್‌ಷಾನನ್ನು ಹಿಡಿದಿದ್ದ ಮೂರು ಸ್ಪರ್ಶಾಂಗಗಳಲ್ಲಿ ಒಂದನ್ನು ಕಿತ್ತುಹಾಕಿದ.

ಈ ಭಯಗೊಳಿಸುವ ದೃಶ್ಯವನ್ನು ನೋಡುತ್ತಿದ್ದಂತೆ ನನ್ನ ರಕ್ತ ನೀರಾಯಿತು. ಮೂರು ಸ್ಪರ್ಶಾಂಗಗಳೂ ಈಗ ನಾಯಿಯನ್ನು ಬಿಟ್ಟು ಅಭಿಯನ್ನು ಸುತ್ತಿಕೊಂಡವು. ಉಳಿದ ಮೂರು ಮನುಷ್ಯ ರಕ್ತ ದೊರೆಯುವ ಸಾಧ್ಯತೆಯಿಂದ ಆಕರ್ಷಿತವಾಗಿ ಆಸೆಬುರುಕ ನಾಲಿಗೆಗಳಂತೆ ನಿಧಾನವಾಗಿ ತೂಗಾಡುತ್ತಾ ಮುಂದುವರಿದವು.

ಕಂಠಿ ಬಾಬು ಒತ್ತಾಯ ಮಾಡಿದರು, "ತುಪಾಕಿ ಹಾರಿಸು, ಪರಿಮಳ್, ಹಾರಿಸು. ಅಲ್ಲಿ, ತಲೆಯ ಕಡೆಗೆ."

ನಾನು ಸೆಫ್ಲೊಪಸ್ ಕಡೆಯೇ ಕಣ್ಣು ನೆಟ್ಟಿದ್ದೆ, ಕಾಂಡದ ಮೇಲ್ಭಾಗದಲ್ಲಿ ಒಂದು ಮುಚ್ಚಳ ತೆರೆದುಕೊಂಡು ತೂತೊಂದು ಇದ್ದುದನ್ನು ಕಂಡೆ. ಸ್ಪರ್ಶಾಂಗಗಳು ಅಭಿಯನ್ನು ಆ ತೂತಿನ ಕಡೆಗೆ ಒಯ್ಯುತ್ತಿದ್ದವು. ಅಭಿಯ ಮುಖ ಬೆಳ್ಳಗಾಗಿತ್ತು, ಕಣ್ಣುಗಳು ಹೊರಕ್ಕೆ ಬರುವಂತಿದ್ದವು.

ಇದನ್ನು ನಾನು ಹಿಂದೆಯೂ ಗಮನಿಸಿದ್ದೇನೆ – ತೀರ ಕಷ್ಟದ ಸಮಯದಲ್ಲಿ ನನ್ನ ನರಗಳು ಮಂತ್ರ ಶಕ್ತಿಯಿಂದಲೋ ಎನ್ನುವ ಹಾಗೆ, ಶಾಂತಸ್ಥಿತಿಯಲ್ಲಿರುತ್ತವೆ.

ದೃಢವಾದ ಕೈಗಳಿಂದ ನಾನು ತುಪಾಕಿಯನ್ನು ಹಿಡಿದುಕೊಂಡೆ, ಸೆಫ್ಲೊಪಸ್‌ನ ತಲೆಯ ಮೇಲೆ ಎರಡು ಗುಂಡಗಿನ ಸ್ಥಳಗಳ ಮಧ್ಯಬಿಂದುವಿಗೆ ಸರಿಯಾಗಿ ತುಪಾಕಿ ಹೊಡೆದೆ.

ಕಾರಂಜಿಯಂತೆ ರಕ್ತ ನೆಗೆದದ್ದೂ ನನಗೆ ನೆನಪಿದೆ. ಸ್ಪರ್ಶಾಂಗಗಳು ಇದ್ದಕ್ಕಿದ್ದಂತೆ ನಿಶ್ಚೇಷ್ಟಿತವಾಗಿ ಅಭಿಯನ್ನು ಬಿಟ್ಟುಬಿಟ್ಟ ಹಾಗೂ ನೆನಪು. ಅನಂತರ ವಾಸನೆ ಹೆಚ್ಚಿತು, ನನ್ನ ಪ್ರಜ್ಞೆಯನ್ನು ಆವರಿಸಿಬಿಟ್ಟಿತು.

* * *

ಈ ಪ್ರಸಂಗವಾಗಿ ನಾಲ್ಕು ತಿಂಗಳು. ಮುಗಿದಿರದಿದ್ದ ನನ್ನ ಕಾದಂಬರಿಯ ಬರಹವನ್ನು ಮುಂದುವರಿಸಲು ಕಡೆಗೂ ನನಗೆ ಸಾಧ್ಯವಾಗಿದೆ.

ಬಾದ್‌ಷಾನನ್ನು ಕಡೆಗೂ ಉಳಿಸಲು ಸಾಧ್ಯವಾಗಲಿಲ್ಲ. ಅಭಿ ಈಗ ಒಂದು ಮ್ಯಾಸ್ಟಿಫ್ ಮರಿಯನ್ನೂ ಟಿಬೆಟನ್ ನಾಯಿಯನ್ನೂ ತಂದಿದ್ದಾನೆ, ಮತ್ತೊಂದು ರಾಮ್‌ಪುರ ಬೇಟೆನಾಯಿಗಾಗಿ ಹುಡುಕುತ್ತಿದ್ದಾನೆ. ಅಭಿಯ ಎರಡು ಪಕ್ಕೆಲುಬುಗಳಿಗೆ ಮುರಿತವಾಗಿತ್ತು. ಎರಡು ತಿಂಗಳು ಪ್ಲಾಸ್ಟರ್ ಹಾಕಿಕೊಂಡಿದ್ದವನು ಈಗ ಮತ್ತೆ ಓಡಾಡುತ್ತಿದ್ದಾನೆ.

ಕಂಠಿಬಾಬು ನಿನ್ನೆ ಬಂದಿದ್ದರು. ತಮ್ಮ ಮಾಂಸಾಹಾರಿ ಸಸ್ಯಗಳನ್ನೆಲ್ಲ ದೂರವಿಡಲು ನಿರ್ಧರಿಸಿದ್ದಾರೆ. "ಕುಂಬಳ, ಹುರಳೀಕಾಯಿ, ಬದನೇಕಾಯಿ ಇಂತಹ ದಿನನಿತ್ಯ ಬಳಸುವ ತರಕಾರಿಗಳ ಮೇಲೆ ಸಂಶೋಧನೆ ಮಾಡುತ್ತೇನೆ ಅಂತ ಅಂದುಕೊಂಡಿದ್ದೇನೆ. ನೀವು ನನಗೆ ತುಂಬಾ ಸಹಾಯ ಮಾಡಿದ್ದೀರಿ. ಬೇಕಾದರೆ ನಿಮಗೆ ನನ್ನ ಕೆಲವು ಸಸ್ಯಗಳನ್ನ ಕೊಡುತ್ತೇನೆ. ಉದಾಹರಣೆಗೆ ಸೆಪತೀಸ್. ಕಡೆಯ ಪಕ್ಷ ನಿಮ್ಮ ಮನೆಯಲ್ಲಿ ಕ್ರಿಮಿಕೀಟಗಳಿರುವುದಿಲ್ಲ."

"ವಂದನೆಗಳು, ಆದರೆ ಸಸ್ಯಗಳು ನನಗೆ ಬೇಡ," ನಾನು ಹೇಳಿದೆ. "ಬೇಕಾದರೆ ಅವನ್ನ ಬಿಸಾಕಿಬಿಡಿ. ನನ್ನ ಮನೆಗಳಿಂದ ಕ್ರಿಮಿಕೀಟಗಳನ್ನು ಓಡಿಸುವುದಕ್ಕೆ ನನಗೆ ಗಿಡವೇನೂ ಬೇಡ."

"ಡಿಟೋ, ಡಿಟೋ" ಎಂದಿತು ಕಿಂಗ್ ಅಂಡ್ ಕಂಪೆನಿಯ ಕ್ಯಾಲೆಂಡರಿನ ಹಿಂದಿನಿಂದ ಒಂದು ಹಲ್ಲಿ.

ಗುಡಿಸಲ ಹಿಂದೆ ರಕ್ಷಣೆ ಇದ್ದ ಸ್ಥಳಕ್ಕೆ ಕೋಳಿಗಳನ್ನು ಅಟ್ಟುತ್ತ ಅವಳು ಸುರಿಯುತ್ತಿದ್ದ ಮಳೆಯಲ್ಲೆ ಓಡಾಡಿದಳು. ನಿರುಪದ್ರವಿಯಾದ ಕಂದು ಹಾವೊಂದು ಅದರ ಬಿಲದಲ್ಲಿ ನೀರು ತುಂಬಿದ್ದರಿಂದ ಬಯಲಲ್ಲಿ ಓಡಾಡುತ್ತಿತ್ತು. ಸೀತೆ ಒಂದು ಕೋಲನ್ನು ತೆಗೆದುಕೊಂಡು ಹಾವನ್ನು ಮೇಲಕ್ಕೆತ್ತಿ ಬಂಡೆಗಳ ಗುಂಪೊಂದರ ಮಧ್ಯೆ ಹಾಕಿದಳು. ಅವಳಿಗೆ ಹಾವುಗಳ ವಿಷಯದಲ್ಲಿ ವಿರೋಧವೇನೂ ಇರಲಿಲ್ಲ. ಅವುಗಳಿಂದ ಕಪ್ಪೆಗಳ ಮತ್ತು ಇಲಿಗಳ ಸಂಖ್ಯೆ ಕಡಿಮೆಯಾಗಿರುತ್ತಿತ್ತು.

ಕಡೆಗೆ ಸೀತೆ ಒಳಕ್ಕೆ ಹೋದಾಗ ಅವಳಿಗೆ ಹಸಿವಾಗುತ್ತಿತ್ತು. ಒಣ ಕಡಲೆಯನ್ನು ತಿಂದಳು, ಆಡಿನ ಹಾಲನ್ನು ಬಿಸಿಮಾಡಿಕೊಂಡಳು.

ಅಜ್ಜಿ ಒಂದು ಸಲ ಎದ್ದು ನೀರು ಬೇಕೆಂದು ಕೇಳಿದಳು. ಅಜ್ಜ ಹಿತ್ತಾಳೆ ಲೋಟವನ್ನು ಅವಳ ತುಟಿಗೆ ಹಿಡಿದು ಕುಡಿಸಿದ.

ರಾತ್ರಿ ಎಲ್ಲ ಮಳೆ ಬರುತ್ತಲೇ ಇತ್ತು.

ಚಾವಣಿ ಸೋರುತ್ತಿತ್ತು; ನೆಲದ ಮೇಲೆ ಒಂದಿಷ್ಟು ನೀರು ನಿಂತಿತ್ತು. ಅಜ್ಜಿ ಸೀಮೆ ಎಣ್ಣೆ ದೀಪವನ್ನು ಆರಿಸಲೇ ಇಲ್ಲ. ಅವರಿಗೆ ದೀಪ ನಿಜವಾಗಿ ಬೇಕಿರಲಿಲ್ಲ. ಆದರೆ ಅದಿದ್ದರೆ ಏನೋ ಒಂದು ಧೈರ್ಯ.

ಅವರು ಗಮನಿಸದಿದ್ದರೂ ಯಾವಾಗಲೂ ನದಿಯ ಶಬ್ದ ಇರುತ್ತಿತ್ತು; ಆದರೆ ಅವತ್ತು ರಾತ್ರಿ ಅದರ ಶಬ್ದದಲ್ಲಿ ಒಂದು ಬದಲಾವಣೆಯನ್ನು ಗಮನಿಸಿದರು. ಎತ್ತರವಾದ ಮರಗಳ ಮೇಲ್ಭಾಗದಲ್ಲಿ ಆಗುವ ಶಬ್ದದಂತೆ, ನರಳುವ ಸದ್ದಿನಂತಿತ್ತು ಅದು. ಬಂಡೆಗಳ ಸುತ್ತ ನೀರು ವೇಗವಾಗಿ ಹರಿದು ಕಲ್ಲುಗಳನ್ನೆಲ್ಲ ಹೊಡೆದುಕೊಂಡು ಹೋಗುವಾಗ ಹಾವಿನ ಬುಸುಗುಟ್ಟುವ ಶಬ್ದದಂತಿತ್ತು. ಸಡಿಲವಾದ ಮಣ್ಣು ನೀರೊಳಗೆ ಬಿದ್ದಾಗ ಶಬ್ದವಾಗುತ್ತಿತ್ತು.

ಸೀತೆಗೆ ನಿದ್ರೆ ಮಾಡುವುದಕ್ಕೆ ಆಗಲಿಲ್ಲ.

ಸಣ್ಣ ಗವಾಕ್ಷಿಯಿಂದ ಬೆಳಕು ಕಂಡಿದ್ದೇ ತಡ, ಅವಳು ಎದ್ದು ಹೊರಕ್ಕೆ ಹೋದಳು. ಮಳೆಯೇನೂ ಜೋರಾಗಿ ಬರುತ್ತಿರಲಿಲ್ಲ, ಸೋನೆ ಮಳೆ ಅಷ್ಟೆ, ಆದರೆ ಹಲವು ದಿನಗಳು ಒಂದೇ ಸಮನೆ ಸುರಿಯುವ ಸೋನೆ ಮಳೆ ಅದು; ಪ್ರಾಯಶಃ ಅದರ ಅರ್ಥ ನದಿ ಹುಟ್ಟಿದ ಬೆಟ್ಟಗಳ ಪ್ರದೇಶದಲ್ಲಿ ಜೋರಾಗಿ ಮಳೆ ಬರುತ್ತಿತ್ತು ಎಂದೇ.

ಸೀತೆ ನೀರಿನ ಅಂಚಿಗೆ ಹೋದಳು. ಆಗಾಗ ಅವಳು ಒಂದು ಬಂಡೆಯ ಮೇಲೆ ಕುಳಿತುಕೊಂಡು ನೀರಿನಲ್ಲಿ ಕಾಲುಗಳನ್ನು ಆಡಿಸುತ್ತಾ ಪುಟ್ಟ ಚಿಲ್ವ ಮೀನುಗಳು ಈಜಿಕೊಂಡು ಹೋಗುವುದನ್ನು ನೋಡುತ್ತಿದ್ದಳು; ಅವಳಿಗೆ ಆ ಬಂಡೆ ಎಂದರೆ ಇಷ್ಟ; ಆದರೆ ಈಗ ಆ ಬಂಡೆ ಕಾಣುತ್ತಲೇ ಇರಲಿಲ್ಲ. ಬಂಡೆಯೇನೋ ಅಲ್ಲೇ ಇತ್ತು, ಆದರೆ ನೀರು ಅದರ ಮೇಲೆ ಹರಿಯುತ್ತಿತ್ತು.

ಅವಳು ಮರಳ ಮೇಲೆ ನಿಂತಳು. ನೀರು ಅವಳ ಪಾದಗಳ ಕೆಳಗೆ ನಿಧಾನವಾಗಿ ಹರಿದು ಗುಳ್ಳಿಯಾಗುತ್ತಿದ್ದುದು ಅವಳಿಗೆ ಗೊತ್ತಾಯಿತು.

ಅಜ್ಜ ದೋಣಿಯಲ್ಲಿ ಹೊರಟಾಗ ಸೂರ್ಯ ಆಗತಾನೆ ಮೇಲಕ್ಕೆ ಬರುತ್ತಿದ್ದ. ಅಜ್ಜಿ ದೋಣಿಯ ಮುಂಭಾಗದಲ್ಲಿ ಮಲಗಿದ್ದಳು. ಅವಳು ಏನನ್ನೋ ಹೇಳಲು ಪ್ರಯತ್ನಿಸುತ್ತ ಸೀತೆಯ ಕಡೆಯೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು, ಆದರೆ ಮಾತುಗಳೇ ಬರುತ್ತಿರಲಿಲ್ಲ. ಆಶೀರ್ವಾದ ಮಾಡುತ್ತಾ ಕೈಯನ್ನೆತ್ತಿದಳು.

ಸೀತೆ ಬಗ್ಗಿ ಅಜ್ಜಿಯ ಪಾದಗಳನ್ನು ಮುಟ್ಟಿದಳು. ಅಜ್ಜ ಹೊರಟುಬಿಟ್ಟ. ಇಬ್ಬರು ಮುದುಕರು ಮೂರು ಆಡುಗಳು ಇದ್ದ ಪುಟ್ಟ ದೋಣಿ ನದಿಯ ಮೇಲೆ ವೇಗವಾಗಿ ಸವಾರಿ ಮಾಡುತ್ತ ಸ್ಥಳ ಮಾಡಿಕೊಂಡು ಎದಿರು ದಡದತ್ತ ಹೊರಟಿತು.

ಅದು ಕ್ರಮೇಣ ಚಿಕ್ಕದಾಗುತ್ತ ನೀರಿನ ಮೇಲೆ ಹಾರುತ್ತಾ ಸಾಗಿತು. ಕಡೆಗೆ ವಿಶಾಲವಾದ ನದಿಯ ಮೇಲೆ ಒಂದು ಚುಕ್ಕೆಯಾಯಿತು.

ಇದ್ದಕ್ಕಿದ್ದಂತೆ ಸೀತೆ ಒಂಟಿಯಾದಳು.

ಅವಳ ಸುತ್ತ ಇದ್ದದ್ದು ಚಾಟಿಯಿಂದ ಹೊಡೆದಂತೆ ಅವಳ ಮುಖಕ್ಕೆ ನೀರಿನ ಹನಿಗಳನ್ನು ಎರಚುತ್ತಿದ್ದ ಗಾಳಿ, ದ್ವೀಪವನ್ನು ದಾಟಿ ನುಗ್ಗುತ್ತಿದ್ದ ನೀರು, ದೂರದ ತೀರವನ್ನು ಮಸುಕು ಮಾಡಿದ್ದ ಮಳೆ, ಸಣ್ಣ ಗುಡಿಸಲು ಮತ್ತು ಮರ.

ಸೀತೆ ಕೆಲಸದಲ್ಲಿ ತೊಡಗಿದಳು. ಕೋಳಿಗಳಿಗೆ ಆಹಾರ ಹಾಕಬೇಕಾಗಿತ್ತು. ಅವಕ್ಕೆ ಆಹಾರ ಬಿಟ್ಟು ಬೇರೆ ಯಾವುದರ ಯೋಚನೆಯೂ ಇರಲಿಲ್ಲ. ಒಂದಿಷ್ಟು ಒರಟು ಧಾನ್ಯ, ಆಲೂಗೆಡ್ಡೆ ಸಿಪ್ಪೆಗಳು ಮತ್ತು ಬಟಾಣಿ ಸಿಪ್ಪೆಗಳನ್ನು ಅವಕ್ಕೆ ಎಸೆದಳು.

ಅನಂತರ ಪೊರಕೆಯನ್ನು ತೆಗೆದುಕೊಂಡು ಗುಡಿಸಲನ್ನು ಚೆನ್ನಾಗಿ ಗುಡಿಸಿದಳು. ಇದ್ದಿಲು ಅಗ್ಗಿಷ್ಟಿಕೆಯನ್ನು ಹೊತ್ತಿಸಿ ಸ್ವಲ್ಪ ಹಾಲನ್ನು ಬಿಸಿಮಾಡಿಕೊಂಡಳು, ಅವಳಿಗೊಂದು ಯೋಚನೆ ಬಂದಿತು, "ನಾಳೆ ಹಾಲು ಇರುವುದಿಲ್ಲ..."

'ಬೂಂ-ಬೂಂ-ಬೂಂ' ಎಂದು ಗುಡುಗು ಬೆಟ್ಟಗಳನ್ನು ಇಳಿದು ಬಂದಿತು.

ಸೀತೆಗೆ ಮನೆಯೊಳಗೆ ಹೆಚ್ಚುಹೊತ್ತು ಇರಲಾಗಲಿಲ್ಲ. ಹೊರಕ್ಕೆ ಬಂದು ನದಿಯಾಚೆ ದಿಟ್ಟಿಸುತ್ತ ನಿಂತಳು. ನದಿ ಈಗ ಮೊದಲಿಗಿಂತ ಅಗಲವಾಗಿ ಕಂಡಿತು. ಅದು ದಡದ ಮೇಲೆ ಬಂದು ಸಮವಾಗಿದ್ದ ಬಯಲು ಪ್ರದೇಶದ ಮೇಲೆ ಬಹು ದೂರದವರೆಗೆ ಹರಡಿಕೊಂಡಿತ್ತು. ದೂರದಲ್ಲಿ ಜನರು ತಮ್ಮ ಮನೆಮಠಗಳನ್ನು ಬಿಟ್ಟು ನೀರು ಸುತ್ತುಗಟ್ಟಿದ್ದ, ಪ್ರವಾಹ ತುಂಬಿದ್ದ ಹೊಲಗಳಲ್ಲಿ ದನಕರುಗಳನ್ನು ಹೊಡೆದುಕೊಂಡು, ತಮ್ಮ ಸಾಮಾನುಗಳನ್ನು ತಲೆಯ ಮೇಲೆ, ಭುಜದ ಮೇಲೆ ಹೊತ್ತುಕೊಂಡು ಹೋಗುತ್ತಿದ್ದರು.

ಎಲ್ಲೆಲ್ಲೂ ನೀರು. ಪ್ರಪಂಚವೇ ಒಂದು ದೊಡ್ಡ ನದಿಯಾಗಿಬಿಟ್ಟಿತ್ತು. ಕಾಡಿದ್ದ ತೀರದ ಮರಗಳು ಸಹ ಮ್ಯಾನ್‌ಗ್ರೋವ್ ಮರದಂತೆ ನೀರಿನಿಂದ ಬೆಳೆದಹಾಗೆ ಕಾಣುತ್ತಿದ್ದವು.

ಮರದ ಹಲಗೆಗಳು, ಸಣ್ಣಪುಟ್ಟ ಮರಗಳು, ಪೊದೆಗಳು, ಅನಂತರ ಒಂದು ಮರದ ಮಂಚ ದ್ವೀಪದ ಪಕ್ಕದಲ್ಲಿ ತೇಲಿಕೊಂಡು ಹೋದಾಗ ಸೀತೆಯ ಅತಿ ಹೆಚ್ಚು ಆತಂಕವೂ ಖಚಿತವಾಯಿತು.

ಅಡುಗೆ ಮಾಡಿಕೊಳ್ಳಲು ತೀರ್ಮಾನಿಸಿದಳು. ಹೊರಕ್ಕೆ ನೋಡಿದಾಗ ಬಂಡೆಗಳ ಮಧ್ಯೆ ಕೊಳದಂತೆ ನೀರು ನಿಂತಿದ್ದೂ ಕಂಡಿತು. ಅದು ಮಳೆಯ ನೀರೇ ಅಥವಾ ನದಿಯು ಉಕ್ಕಿ ಹರಿದದ್ದೆ ಎಂದು ತಿಳಿಯುವಂತಿರಲಿಲ್ಲ.

ಅವಳಿಗೊಂದು ಯೋಚನೆ ಹೊಳೆಯಿತು.

ಕೊಠಡಿಯ ಒಂದು ಮೂಲೆಯಲ್ಲಿ ದೊಡ್ಡದೊಂದು ಟಿನ್‌ಪೆಟ್ಟಿಗೆ ಇತ್ತು. ಅದು ಸೀತೆಯ ತಾಯಿಯದು. ಬೆಲೆ ಬಾಳುವುದು ಅಥವಾ ಉಪಯುಕ್ತವಾದುದು ಎಲ್ಲ ಸಾಮಾನುಗಳನ್ನೂ ಅದರಲ್ಲಿ ಇಟ್ಟು ಅದನು ಭಾರಮಾಡಿಬಿಟ್ಟರೆ ನದಿಯ ನಿರೇನಾದರೂ ಉಕ್ಕಿಬಂದರೂ, ಅದನು ತೆಗೆದುಕೊಂಡು ಹೋಗಲೇಬೇಕಾಗುವುದಿಲ್ಲ ಎನ್ನಿಸಿತು.

ತಾತನ ಹುಕ್ಕ, ಅಜ್ಜಿ ನಡೆಯಲು ಬಳಸುತ್ತಿದ್ದ ಕೋಲು, ಬೇಳೆ ಮತ್ತು ಮಸಾಲೆಗಳಿದ್ದ ಸಣ್ಣ ಡಬ್ಬಿಗಳು ಎಲ್ಲ ಪೆಟ್ಟಿಗೆಯಲ್ಲಿ ಸೇರಿದವು. ಸೀತೆ ಮರದ ಮೇಲೆ ಹಲವು ಗಂಟೆಗಳನ್ನೇ ಕಳೆಯಬೇಕಾಗಿ ಬಂದರೂ, ಕೆಳಕ್ಕಿಳಿದು ಬಂದಾಗ ತಿನ್ನುವುದಕ್ಕೆ ಏನಾದರೂ ಇರುವುದು ಖಾತರಿಯಾಯಿತು!

ಪೆಟ್ಟಿಗೆಯಲ್ಲಿ ಸಾಮಾನುಗಳನ್ನು ತುಂಬುವುದರಲ್ಲಿ ಅವಳಿಗೆ ತಣ್ಣಗಿನ ನೀರು ತನ್ನ ಅಂಗಾಲನ್ನು ನೆಕ್ಕುತ್ತಿದ್ದುದು ಗಮನಕ್ಕೆ ಬಂದಿರಲಿಲ್ಲ. ಪೆಟ್ಟಿಗೆಗೆ ಬೀಗ ಹಾಕಿ, ಬಂಡೆಯ ಗೋಡೆಯಲ್ಲಿ ಎತ್ತರದಲ್ಲಿದ್ದ ಗೂಡಿನಲ್ಲಿ ಬೀಗದಕೈಯ್ಯನ್ನಿಟ್ಟಳು. ಅನಂತರವೇ ಅವಳಿಗೆ ತಾನು ನೀರು ತುಂಬಿದ ನೆಲದ ಮೇಲೆ ಓಡಾಡುತ್ತಿದ್ದೇನೆ ಎನ್ನುವುದರ ಅರಿವಾದದ್ದು.

ಅವಳು ಕಂಡ ನೋಟದಿಂದ ಭಯವಾಗಿ ಸುಮ್ಮನೆ ನಿಂತಳು. ನೀರು ದಾರಿ ಮಾಡಿಕೊಂಡು ಹೊಸ್ತಿಲಿನ ಮೇಲಿಂದ ಸಣ್ಣ ಧಾರೆಯಾಗಿ ಬರುತ್ತಿತ್ತು.

ಸೀತೆಗೆ ಬೇರೆಲ್ಲವೂ ಮರೆತುಹೋಯಿತು. ಗುಡಿಸಿಲಿನಿಂದ ಬಾಣದಂತೆ ಸಾಗಿ ಅವಳು ಅಶ್ವತ್ಥ ವೃಕ್ಷದ

ಸುರಕ್ಷತೆಯನ್ನು ಸೇರಿದಳು. ಚೆನ್ನಾಗಿ ಪರಿಚಿತವಾದ ಎದ್ದುಕಾಣುವ ಗುರುತು ಅಶ್ವತ್ಥಮರ ಅಲ್ಲಿ ಇಲ್ಲದೆ ಹೋಗಿದ್ದರೆ ಅವಳು ಆಳವಾದ ನೀರಿನಲ್ಲಿ ದಾರಿತಪ್ಪಿ ನದಿಯಲ್ಲಿ ಬಿದ್ದುಬಿಡಬಹುದಾಗಿತ್ತು.

ಅವಳು ಬೇಗಬೇಗ ಮರದ ಬಲಶಾಲಿ ತೋಳುಗಳ ನಡುವಣ ಸ್ಥಳಕ್ಕೆ ಹತ್ತಿಹೋದಳು. ತನಗೆ ಚೆನ್ನಾಗಿ ಪರಿಚಿತವಾಗಿದ್ದ ಕೊಂಬೆಯೊಂದರ ಮೇಲೆ ಸುರಕ್ಷಿತವಾಗಿ ಕುಳಿತಳು ಮತ್ತು ಒದ್ದೆಯಾಗಿದ್ದ ಕೂದಲನ್ನು ಕಣ್ಣಿನಿಂದಾಚೆ ಸರಿಸಿದಳು.

* * *

ಬೇಗಬೇಗ ತಾನು ಬಂದಿದ್ದಕ್ಕೆ ಅವಳಿಗೆ ಸಂತೋಷವಾಯಿತು. ಈಗ ಗುಡಿಸಿಲಿನ ಸುತ್ತ ನೀರು ಬಂದಿತ್ತು. ದ್ವೀಪದ ಎತ್ತರದ ಭಾಗಗಳು ಮಾತ್ರ – ಕೆಲವು ಬಂಡೆಗಳು, ಗುಡಿಸಲನ್ನು ಸೇರಿಸಿದ ದೊಡ್ಡ ಬಂಡೆ, ಒಂದಿಷ್ಟು ಪೊದೆ ಬೆಳೆದಿದ್ದ ಗುಡ್ಡ ಇವು ಮಾತ್ರ ಇನ್ನೂ ಕಾಣುತ್ತಿದ್ದವು.

ಕೋಳಿಗಳು ಗುಡಿಸಲನ್ನು ಬಿಡುವ ತೊಂದರೆಯನ್ನು ತೆಗೆದುಕೊಂಡಿರಲಿಲ್ಲ. ಪ್ರಾಯಶಃ ಅವು ಈಗ ಮಂಚದ ಮೇಲೆ ಕುಳಿತಿರಬಹುದು.

ನೋಡಲು ಅಪರೂಪವಾಗಿದ್ದ ವಸ್ತುಗಳೆಲ್ಲ ನೀರಿನಲ್ಲಿ ತೇಲಿಕೊಂಡು ಹೋದವು. ಅಲ್ಯೂಮಿನಿಯಂ ಕೆಟ್ಲ್, ಬೆತ್ತದ ಕುರ್ಚಿ, ಹಲ್ಲುಪುಡಿಯ ಟಿನ್, ಖಾಲಿ ಸಿಗರೇಟ್ ಪ್ಯಾಕೇಟ್, ಮರದ ಚಪ್ಪಲಿ, ಪ್ಲಾಸ್ಟಿಕ್ ಗೊಂಬೆ...

ಈಗ ನೀರು ಮೇಲೇರಿತ್ತು. ದ್ವೀಪ ಬೇಗ ಬೇಗ ಮರೆಯಾಗುತ್ತಿತ್ತು.

ಏನೋ ತೇಲುತ್ತ ಗುಡಿಸಿಲಿನಿಂದ ಹೊರಕ್ಕೆ ಬಂತು.

ಅದೊಂದು ಖಾಲಿ ಸೀಮೆಣ್ಣೆ ಡಬ್ಬ, ಅದರ ಮೇಲೊಂದು ಕೋಳಿ. ಡಬ್ಬವು ನೀರಿನ ಮೇಲೆ ಕುಣಿಯುತ್ತ ಬಂತು, ಮರದಿಂದ ದೂರವೇನೂ ಇರಲಿಲ್ಲ, ಪ್ರವಾಹಕ್ಕೆ ಸಿಕ್ಕಿ ನದಿಯಲ್ಲಿ ಸಾಗಿಹೋಯಿತು. ಕೋಳಿ ಇನ್ನೂ ಕುಳಿತೇ ಇತ್ತು.

ಸ್ವಲ್ಪ ಹೊತ್ತಿನಲ್ಲಿ ನೀರು ಹಾಸಿಗೆಯವರೆಗೆ ಏರಿರಬೇಕು. ಏಕೆಂದರೆ ಉಳಿದ ಕೋಳಿಗಳು ಬಂಡೆಯ ಅಂಚಿಗೆ ಹಾರಿ ಸ್ವಲ್ಪ ಹಿಂದಿದ್ದ ಭಾಗದಲ್ಲಿ ಮುದುರಿ ಕುಳಿತವು.

ಸೀತೆ ಇನ್ನೂ ಸ್ವಲ್ಪ ಮೇಲಕ್ಕೆ ಹತ್ತಿಹೋದಳು; ಅವಳು ಹತ್ತುತ್ತಿದ್ದಂತೆ ಇದ್ದಿಲು ಕಪ್ಪಿನ ಕಾಗೆಯೊಂದು ಮೇಲಿನ ಕೊಂಬೆಗಳಲ್ಲಿ ಕುಳಿತುಕೊಂಡಿತು. ಅಲ್ಲಿದ್ದ ಒಂದು ಗೂಡು ಸೀತೆಗೆ ಕಾಣಿಸಿತು; ಒಂದು ಕೊಂಬೆಯ ಕವಲಿನಲ್ಲಿ ಸೇರಿಸಿದ ಕಡಿಗಳ ಸೊಟ್ಟಪುಟ್ಟನೆಯ ಪುಟ್ಟ ಜಗುಲಿಯಂತೆ ಅದು ಕಾಣುತ್ತಿತ್ತು.

ಗೂಡಿನಲ್ಲಿ ನಾಲ್ಕು ನೀಲಿ ಹಸಿರು ಬಣ್ಣದ, ಚುಕ್ಕೆಗಳಿದ್ದ, ಮೊಟ್ಟೆಗಳಿದ್ದವು. ಕಾಗೆ ಅವುಗಳ ಮೇಲೆ ಕುಳಿತು ವ್ಯಗ್ರವಾಗಿ ಕೂಗಿತು. ಕಾಗೆ ದುಃಖದಲ್ಲಿದ್ದರೂ ಅದು ಇದ್ದದ್ದರಿಂದ ಸೀತೆಗೆ ಸ್ವಲ್ಪ ಉಲ್ಲಾಸವಾಯಿತು. ಇನ್ನೇನಿಲ್ಲದಿದ್ದರೂ ಅವಳು ಒಂಟಿಯಾಗಿರಲಿಲ್ಲ. ಜೊತೆಗೆ ಯಾರೂ ಇಲ್ಲದಿರುವುದಕ್ಕಿಂತ ಒಂದು ಕಾಗೆ ಇರುವುದು ಉತ್ತಮ.

ಗುಡಿಸಿಲಿನಿಂದ ಇನ್ನೂ ಕೆಲವು ವಸ್ತುಗಳು ತೇಲಿಬಂದವು. ದೊಡ್ಡ ಕುಂಬಳಕಾಯಿ ಮತ್ತು ಉದ್ದವಾದ ಹಾವಿನಂತೆ ಸುರುಳಿ ಬಿಚ್ಚಿಕೊಳ್ಳುತ್ತಾ ಬಂದ ಕೆಲವು ರುಮಾಲು, ತಾತನದು.

ಗಾಳಿ ಮಳೆಗಳಲ್ಲಿ ಮರ ನಡುಗಿತು. ಕಾಗೆ ಕೂಗಿ ಮೇಲಕ್ಕೆ ಹಾರಿತು, ಮತ್ತೆ ಮತ್ತೆ ಗಿಡದ ಸುತ್ತ ಹಾರಿತು, ಅನಂತರ ಗೂಡಿಗೆ ಹಿಂದಿರುಗಿತು. ಸೀತೆ ಕೊಂಬೆಯನ್ನು ಗಟ್ಟಿಯಾಗಿ ಹಿಡಿದುಕೊಂಡಳು.

ಎತ್ತರವಾದ ಮರ ಬೇರಿನಿಂದ ಮೇಲಿನ ಕೊಂಬೆಯವರೆಗೂ ನಡುಗಿತು. ಸೀತೆಗೆ ಭೂಕಂಪವಾಗಿ ಮರ ನಡುಗುತ್ತಿದೆ ಎನ್ನಿಸಿತು.

ಈಗ ಅವಳ ಸುತ್ತಲೂ ನದಿ ಸುಳಿಸುಳಿಯಾಗಿ ವೇಗವಾಗಿ ಹರಿಯುತ್ತಿತ್ತು. ಸ್ವಲ್ಪ ಹೆಚ್ಚುಕಡಿಮೆ ಗುಡಿಸಿಲಿನ ಚಾವಣಿಯವರೆಗೆ ಬಂದುಬಿಟ್ಟಿತ್ತು. ಸ್ವಲ್ಪ ಹೊತ್ತಿನಲ್ಲೆ ಗುಡಿಸಿಲಿನ ಮಣ್ಣುಗೋಡೆಗಳು ಪುಡಿಪುಡಿಯಾಗಿ ಮಾಯವಾಗಿಬಿಡುತ್ತವೆ. ದೊಡ್ಡ ಬಂಡೆ ಮತ್ತು ದೂರದಲ್ಲಿ ಕೆಲವು ಮರಗಳು ಇವನ್ನು ಬಿಟ್ಟರೆ ನೀರು ಮಾತ್ರ ಕಾಣುತ್ತಿತ್ತು.

ಎತ್ತರವಾದ ಅಶ್ವತ್ಥಮರ ನರಳಿದ ಶಬ್ದ ಮಾಡಿತು. ಅದರ ಉದ್ದವಾದ ಸೊಟ್ಟಸೊಟ್ಟನಾದ ಬೇರುಗಳು ಭದ್ರವಾಗಿ ಭೂಮಿಗೆ ಅಂಟಿಕೊಂಡಿದ್ದವು, ಆದರೆ ಭೂಮಿಯೇ ಮೆದುವಾಗುತ್ತಿತ್ತು. ಕಲ್ಲುಗಳು ಕೊಚ್ಚಿ ಹೋಗುತ್ತಿದ್ದವು. ಬೇರುಗಳ ಹಿಡಿತ ವೇಗವಾಗಿ ತಪ್ಪಿಹೋಗುತ್ತಿತ್ತು.

ಏನೋ ಹೆಚ್ಚುಕಡಿಮೆಯಾಗಿದೆ ಎಂದು ಗೊತ್ತಾಗಿರಬೇಕು ಕಾಗೆಗೆ, ಏಕೆಂದರೆ ಅದು ಮರದ ಮೇಲೆ ಕುಳಿತುಕೊಳ್ಳಲೂ ಇಷ್ಟಪಡದೆ ಹಾರಿ ಹೊರಟುಹೋಗಲೂ ಆಗದೆ ಮೇಲೆ ಏರಿ ಮರದ ಸುತ್ತ ಹಾರುತ್ತಿತ್ತು.

ಸೀತೆಯ ಒದ್ದೆಯಾದ ಹತ್ತಿಯುಡುಪು ಅವಳ ತೆಳುಮೈಗೆ ಅಂಟಿಕೊಂಡುಬಿಟ್ಟಿತ್ತು. ಮಳೆಯು ಅವಳ ಉದ್ದ ಕಪ್ಪು ಕೂದಲಿನ ಮೇಲೆ ಜಾರಿ ಉರುಳುತ್ತಿತ್ತು. ಮಳೆ ಮರದ ಪ್ರತೀ ಎಲೆಯಿಂದಲೂ ಸುರಿಯುತ್ತಿತ್ತು. ಕಾಗೆಯೂ ತೊಯ್ದು ಹೋಗಿ ತತ್ತರಿಸುತ್ತಿತ್ತು.

ಮರ ಮತ್ತೆ ನರಳುವಂತೆ ಶಬ್ದ ಮಾಡುತ್ತ ಅಲ್ಲಾಡಿತು.

ಕೆಳಗಿನಿಂದ ಮಣ್ಣು ಮೇಲೆದ್ದಿತು. ಮರ ಅಲ್ಲಾಡುತ್ತಿದ್ದಂತೆ ವಾಲಿತು, ನಿಧಾನವಾಗಿ ಮುಂದಕ್ಕೆ ಬಾಗಿತು; ತನ್ನ ಬೇರುಗಳನ್ನು ನೆಲದ ಮೇಲೆ ಎಳೆದಾಡುತ್ತಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸ್ವಲ್ಪ ತಿರುಗಿತು. ಅನಂತರ ಅದು ನದಿಯ ಮುಖ್ಯ ಪ್ರವಾಹದೊಳಕ್ಕೆ ಜಾರಿತು.

* * *

ರೆಂಬೆಗಳು ಅವಳನ್ನು ಅತ್ತಿತ್ತ ತೂಗಾಡಿದವು, ಆದರೆ ಸೀತೆ ತನ್ನ ಹಿಡಿತವನ್ನು ಬಿಡಲಿಲ್ಲ. ಈಗ ನೀರು ಬಹಳ ಹತ್ತಿರವೇ ಇತ್ತು, ಅವಳಿಗೆ ಭಯವಾಯಿತು. ಪ್ರವಾಹ ಎಷ್ಟಿದೆ, ನದಿಯ ಅಗಲ ಎಷ್ಟು ಯಾವುದೂ ಅವಳಿಗೆ ಕಾಣುತ್ತಿರಲಿಲ್ಲ. ಸುತ್ತ ನೀರು, ಅದರಿಂದ ತಕ್ಷಣದ ಅಪಾಯ ಅವಳಿಗೆ ಕಾಣುತ್ತಿದ್ದುದು.

ಕಾಗೆ ಮರದ ಸುತ್ತಲೂ ಹಾರುತ್ತಲೇ ಇತ್ತು. ಪಕ್ಷಿಗೆ ಬಹಳ ಕೋಪ ಬಂದಿತ್ತು. ಅದರ ಗೂಡು ಇನ್ನೂ ರೆಂಬೆಗಳಲ್ಲೇ ಇತ್ತು – ಆದರೆ ಬಹಳ ಹೊತ್ತೇನೂ ಹಾಗೆ ಉಳಿಯಲಿಲ್ಲ... ಮರ ಥಟ್ಟನೆ ಮುಂದಕ್ಕೆ ಬಾಗಿ ಸ್ವಲ್ಪ ಮಟ್ಟಿಗೆ ಒಂದು ಕಡೆಗೆ ವಾಲಿತು, ಗೂಡು ನೀರಿನೊಳಕ್ಕೆ ಬಿತ್ತು. ಮೊಟ್ಟೆಗಳು ಒಂದೊಂದಾಗಿ ನೀರಿನಲ್ಲಿ ಮಾಯವಾದದ್ದನ್ನು ಸೀತೆ ನೋಡಿದಳು.

ಕಾಗೆ ವೇಗವಾಗಿ ಕೆಳಕ್ಕೆ ನೀರಿನತ್ತ ಹಾರಿಬಂತು, ಆದರೆ ಅದು ಏನನ್ನೂ ಮಾಡುವಂತಿರಲಿಲ್ಲ. ಕೆಲವು ಕ್ಷಣಗಳಲ್ಲಿ ಗೂಡು ಕಣ್ಮರೆಯಾಗಿತ್ತು.

ಪಕ್ಷಿ ಗಿಡದಲ್ಲಿ ಏನಾದರೂ ಉಳಿದಿದೆ ಎನ್ನುವ ಆಸೆಯನ್ನು ಇಟ್ಟುಕೊಂಡಿದ್ದಿರಬೇಕು. ಸುಮಾರು ಐವತ್ತು ಗಜ ಅದರ ಜೊತೆಗೇ ಹಾರಿಬಂದಿತು. ಅನಂತರ ರೆಕ್ಕೆಗಳನ್ನು ಬಡಿಯುತ್ತ ಗಾಳಿಯಲ್ಲಿ ಬಹು ಎತ್ತರಕ್ಕೆ ಏರಿತು, ನದಿಯನ್ನು ದಾಟಿ ಹಾರುತ್ತ ಕಣ್ಮರೆಯಾಯಿತು.

ಸೀತೆ ಮತ್ತೆ ಒಬ್ಬಳೇ ಆದಳು. ಆದರೆ ಒಂಟಿಯಾದೆ ಎಂದುಕೊಳ್ಳಲೂ ಸಮಯವಿರಲಿಲ್ಲ. ಎಲ್ಲ ಚಲಿಸುತ್ತಿತ್ತು – ಮೇಲಕ್ಕೆ, ಕೆಳಕ್ಕೆ, ಒಂದು ಪಕ್ಕದಿಂದ ಇನ್ನೊಂದು ಪಕ್ಕಕ್ಕೆ, ಮುಂದಕ್ಕೆ ಚಲಿಸುತ್ತಿತ್ತು. ಅವಳೆಂದುಕೊಂಡಳು, "ಸ್ವಲ್ಪ ಹೊತ್ತಿನಲ್ಲಿ ಗಿಡ ಮಗುಚಿಕೊಳ್ಳುತ್ತದೆ, ನಾನು ನೀರಿನಲ್ಲಿ ಬಿದ್ದುಬಿಡುತ್ತೇನೆ."

ದೂರದಲ್ಲಿ ಪ್ರವಾಹದ ನೀರು ತುಂಬಿದ ಹಳ್ಳ, ಚಪ್ಪಟೆ ತಳದ ದೋಣಿಗಳಲ್ಲಿ ಜನ ಕಂಡಳು; ಆದರೆ ಅವರೆಲ್ಲ ಬಹುದೂರ ಇದ್ದರು.

ಗಿಡದ ದೊಡ್ಡ ಗಾತ್ರದಿಂದ ಅದು ನದಿಯಲ್ಲಿ ವೇಗವಾಗಿ ಸಾಗಲಿಲ್ಲ. ಒಮ್ಮೊಮ್ಮೆ ನೀರು ಆಳವಿಲ್ಲದ ಕಡೆ ಅದರ ಬೇರುಗಳು ಬಂಡೆಗಳಲ್ಲಿ ಸಿಕ್ಕಿಕೊಂಡು ಅದು ನಿಲ್ಲುತ್ತಿತ್ತು. ಆದರೆ ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ; ನದಿಯ ವೇಗ ಅದನ್ನು ಮುಂದಕ್ಕೆ ಹೊಡೆದುಕೊಂಡು ಹೋಗುತ್ತಿತ್ತು.

ಒಂದು ಕಡೆ ನದಿಯಲ್ಲಿದ್ದ ತಿರುವಿನಲ್ಲಿ ಮರವು ಮರಳುಗುಡ್ಡಕ್ಕೆ ಹೊಡೆದು ನಿಶ್ಚಲವಾಯಿತು.

ಸೀತೆಗೆ ಬಹಳ ಆಯಾಸವಾಗಿತ್ತು. ಅವಳ ತೋಳುಗಳು ನೋಯುತ್ತಿದ್ದವು, ಅವಳು ತಲೆ ಮೇಲಾಗಿಯೂ ಇರಲಿಲ್ಲ. ಮರ ಪಾರ್ಶ್ವಕ್ಕೆ ವಾಲಿದ್ದರಿಂದ ಅವಳು ಬೀಳದಂತೆ ರೆಂಬೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕಾಗಿತ್ತು. ಮಳೆ ಇನ್ನೂ ಸುರಿಯುತ್ತಲೇ ಇತ್ತು.

ಆಗ ಸೀತೆಗೆ ಯಾರೋ ತನ್ನನ್ನು ಕರೆದದ್ದು ಕೇಳಿಸಿತು. ನದಿಯ ಮೇಲ್ದಿಕ್ಕಿನಲ್ಲಿ ನೋಡಲು ಕುತ್ತಿಗೆಯನ್ನು ಎತ್ತಿದಾಗ ಸಣ್ಣ ದೋಣಿಯೊಂದು ಅವಳ ಕಡೆಗೆ ಬರುತ್ತಿದ್ದುದು ಕಾಣಿಸಿತು.

ದೋಣಿಯಲ್ಲಿ ಒಬ್ಬ ಹುಡುಗನಿದ್ದ. ಅವನು ದೋಣಿಯನ್ನು ಮರಕ್ಕೆ ಬಹು ಹತ್ತಿರ ತಂದ, ತಾನು ಭದ್ರವಾಗಿ ನಿಲ್ಲಲು ಒಂದು ರೆಂಬೆಯನ್ನು ಹಿಡಿದುಕೊಂಡು ಇನ್ನೊಂದು ಕೈಯನ್ನು ಸೀತೆಯ ಕಡೆ ಚಾಚಿದ.

ಅವಳು ಅವನ ಕೈಯನ್ನು ಕೂಡಲೇ ಹಿಡಿದುಕೊಂಡು ದೋಣಿಯಲ್ಲಿ ಅವನ ಪಕ್ಕಕ್ಕೆ ಕುಸಿದಳು. ಅವನು ತನ್ನ ಬರಿಯ ಪಾದವನ್ನು ಮರದ ಮೇಲಿಟ್ಟು ಹೊರಟುಬಿಟ್ಟ.

ಸಣ್ಣ ದೋಣಿ ವೇಗವಾಗಿ ನದಿಯಲ್ಲಿ ಸಾಗಿತು, ದೊಡ್ಡ ಮರ ಬಹು ಹಿಂದೆ ಉಳಿಯಿತು. ಸೀತೆ ಮತ್ತೆ ಅದನ್ನು ಕಾಣಲಿಲ್ಲ.

* * *

ಸೀತೆಗೆ ಮಾತನಾಡಲೂ ಆಗದಷ್ಟು ಗಾಭರಿಯಾಗಿತ್ತು. ಅವಳು ದೋಣಿಯಲ್ಲಿ ಮೈಚಾಚಿ ಮಲಗಿದ್ದಳು. ಹುಡುಗ ಅವಳ ಕಡೆ ನೋಡಿದ, ಆದರೆ ಏನೂ ಹೇಳಲಿಲ್ಲ. ಅವನು ಮುಗುಳ್ನಗೆ ಸಹ ನಗಲಿಲ್ಲ. ನಿರಾತಂಕವಾಗಿ ಹುಟ್ಟು ಹಾಕುತ್ತ ಆತನು ಹುಟ್ಟುಗಳ ಮೇಲೆ ಬಾಗಿದ್ದ, ದೋಣಿ ನದಿಯ ಮಧ್ಯೆ ಹೋಗದಂತೆ ತಡೆಯಲು ಪ್ರಯತ್ನಿಸುತ್ತಿದ್ದ. ವೇಗವಾದ ಪ್ರವಾಹದಿಂದ ದೂರಕ್ಕೆ ದೋಣಿಯನ್ನು ಒಯ್ಯುವಷ್ಟು ಶಕ್ತಿ ಅವನಿಗಿರಲಿಲ್ಲ; ಆದರೆ ಅವನು ಪ್ರಯತ್ನಿಸುತ್ತಿದ್ದ.

ಕಡೆಗೆ ಅವನು ಇನ್ನೂ ವಿಶಾಲವಾದ ಶಾಂತವಾದ ನದಿಯ ಹರವನ್ನು ಮುಟ್ಟಿದ. ಹುಟ್ಟುಗಳನ್ನು ಒರಗಿಕೊಂಡು ದೋಣಿ ತಾನೇ ತೇಲಿಹೋಗಲು ಬಿಟ್ಟು ಅವನೆಂದ: "ನೀನು ದ್ವೀಪದಲ್ಲಿ ವಾಸಿಸುತ್ತಿ. ನಿನ್ನನ್ನು ಕೆಲವು ಬಾರಿ ನೋಡಿದ್ದೇನೆ. ಆದರೆ ಉಳಿದವರೆಲ್ಲ ಎಲ್ಲಿ?"

"ನನ್ನ ಅಜ್ಜಿಗೆ ಖಾಯಿಲೆಯಾಗಿತ್ತು," ಸೀತೆ ಹೇಳಿದಳು, "ಅಜ್ಜ ಅವಳನ್ನು ಷಾಗಂಜಿನಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋದ."

ಅವಳು ಹುಡುಗನನ್ನು ಆವರೆಗೆ ನೋಡಿಯೇ ಇರಲಿಲ್ಲ. ಆದ್ದರಿಂದ, "ನೀನೆಲ್ಲಿಂದ ಬಂದೆ?" ಎಂದು ಕೇಳಿದಳು.

"ಬೆಟ್ಟದ ತಪ್ಪಲಿನ ಒಂದು ಹಳ್ಳಿಯಿಂದ. ನಾನು ನನ್ನ ದೋಣಿಯಲ್ಲಿ ನದಿಯನ್ನು ದಾಟಲು ಪ್ರಯತ್ನಿಸುತ್ತಿದ್ದೆ. ಆಗ ಹಳ್ಳಿಗೆ ಪ್ರವಾಹ ನುಗ್ಗಿದ ವಿಷಯ ತಿಳಿಯಿತು. ಆದರೆ ಪ್ರವಾಹ ತೀರ ಜೋರಾಗಿತ್ತು, ನನ್ನನ್ನ ನಿಮ್ಮ ದ್ವೀಪ ದಾಟಿ ನೂಕಿಕೊಂಡು ಬಂದಿತು. ನಾವು ನದಿಯ ಜೊತೆಗೆ ಹೋರಾಡುವ ಹಾಗಿಲ್ಲ, ಅದು ಒಯ್ದು ಕಡೆ ಹೋಗಬೇಕು."

ಅವನು ಒಂದು ಹುಟ್ಟನ್ನು ಒಳಕ್ಕೆ ತೆಗೆದುಕೊಂಡ, ಮತ್ತೊಂದು ಕೈಯಿಂದ ಪೀಠದ ಕೆಳಗೆ ತಡಕಾಡಿದ. ಅಲ್ಲಿ ಒಂದು ಸಣ್ಣ ಬುಟ್ಟಿ ಇತ್ತು. ಅವನು ಎರಡು ಮಾವಿನ ಹಣ್ಣುಗಳನ್ನು ಹೊರಕ್ಕೆ ತೆಗೆದು ಒಂದನ್ನು ಸೀತೆಗೆ ಕೊಟ್ಟ.

ಹಣ್ಣುಗಳ ಸಿಪ್ಪೆಯನ್ನು ತೆಗೆದುಹಾಕಲು ತಮ್ಮ ಹಲ್ಲುಗಳನ್ನು ಬಳಸಿ ಅವರು ಮೃದುವಾಗಿದ್ದ ಮಾವಿನ ಹಣ್ಣುಗಳಲ್ಲಿ ಆಳವಾಗಿ ಹಲ್ಲುಗಳನ್ನು ಊರಿದರು. ಸಿಹಿಯಾದ ರಸ ಅವರ ಗಲ್ಲಗಳ ಮೇಲೆ ಹರಿಯಿತು. ಹಣ್ಣಿನ ರುಚಿ ಸ್ವರ್ಗದ ಹಣ್ಣಿನಂತಹದು. ಸೀತೆ ಮಾವಿನ ಹಣ್ಣು ತಿಂದು ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲವಾಗಿತ್ತು. ಕೆಲವು ಕ್ಷಣಗಳು ಅವಳು ನದಿಯನ್ನು ಮರೆತೇ ಬಿಟ್ಟಳು – ಮಾವಿನ ಹಣ್ಣೊಂದೇ ಮುಖ್ಯವಾಗಿತ್ತು.

ದೋಣಿ ತನ್ನಷ್ಟಕ್ಕೆ ತಾನೇ ಸಾಗುತ್ತಿತ್ತು. ಆದರೆ ಮೊದಲಿನಷ್ಟು ವೇಗವಾಗಿ ಹೋಗುತ್ತಿರಲಿಲ್ಲ, ಏಕೆಂದರೆ ಬೆಟ್ಟದ ತಪ್ಪಲಿನಿಂದ ನದಿ ದೂರವಾದಷ್ಟೂ ಅದರ ಶಕ್ತಿ ಮತ್ತು ರೋಷ ಕಡಿಮೆಯಾಗಿದ್ದವು.

"ನನ್ನ ಹೆಸರು ಕೃಷ್ಣ," ಹುಡುಗ ಹೇಳಿದ. "ನನ್ನ ತಂದೆ ಬಳಿ ಬೇಕಾದಷ್ಟು ಹಸುಗಳು, ಎಮ್ಮೆಗಳು ಇವೆ. ಆದರೆ ಪ್ರವಾಹದಲ್ಲಿ ಅನೇಕ ಹಸುಗಳು, ಎಮ್ಮೆಗಳು ಹೋಗಿಬಿಟ್ಟವು."

"ನೀನು ಶಾಲೆಗೆ ಹೋಗ್ತಿ ಅಂದುಕೊಂಡಿದ್ದೇನೆ," ಸೀತೆ ಹೇಳಿದಳು.

"ಹೌದು, ನಾನು ಶಾಲೆಗೆ ಹೋಗುತ್ತೇನೆ ಅಂತಲೇ ಲೆಖ್ಖ. ನಮ್ಮ ಹಳ್ಳಿಯಿಂದ ಶಾಲೆಗೆ ಅಷ್ಟೇನೂ ದೂರ ಇಲ್ಲ. ನೀನೂ ಶಾಲೆಗೆ ಹೋಗಬೇಕೇನು?"

"ಇಲ್ಲ, ಮನೆಯಲ್ಲೆ ತುಂಬಾ ಕೆಲಸ ಇರುತ್ತದೆ."

ಮನೆಯಲ್ಲಿ ಇರಬೇಕಾಗಿತ್ತು ಎಂದು ಆಸೆಪಟ್ಟು ಪ್ರಯೋಜನವಿರಲಿಲ್ಲ – ಮನೆಯೇ ಇರಲಿಲ್ಲವಲ್ಲ!

"ಮರಗಳನ್ನ ತಲುಪುವುದಕ್ಕೆ ನಾನು ಪ್ರಯತ್ನಿಸುತ್ತೇನೆ," ಹುಡುಗ ಹೇಳಿದ. "ರಾತ್ರಿ ನದಿಯಲ್ಲಿ ಕಳೆಯುವುದು ಬೇಡವಲ್ಲ!"

ಮರಗಳತ್ತ ಹೋಗಲು ಹುಟ್ಟು ಹಾಕಿದ. ಹತ್ತು ನಿಮಿಷ ಶ್ರಮ ಪಟ್ಟು ದೋಣಿಯನ್ನು ನಡೆಸಿದ ಮೇಲೆ ನದಿಯ ಒಂದು ತಿರುವನ್ನು ತಲುಪಿದ್ದಾಯಿತು. ಅವರು ಮುಖ್ಯ ಪ್ರವಾಹದ ಸೆಳವಿನಿಂದ ತಪ್ಪಿಸಿಕೊಂಡರು.

ಸ್ವಲ್ಪ ಹೊತ್ತಿನಲ್ಲೆ ಅವರು ಕಾಡಿನಲ್ಲಿ, ನಿತ್ಯಹರಿದ್ವರ್ಣಗಳ ಮಧ್ಯೆ ದೋಣಿಯ ಹುಟ್ಟು ಹಾಕುತ್ತಿದ್ದರು.

"ದೋಣಿಯನ್ನು ಈ ಮರಗಳಲ್ಲಿ ಒಂದಕ್ಕೆ ಕಟ್ಟಿಹಾಕೋಣ," ಕೃಷ್ಣ ಹೇಳಿದ. "ಆಮೇಲೆ ನಾವು ವಿಶ್ರಾಂತಿ ತೆಗೆದುಕೊಳ್ಳಬಹುದು. ನಾಳೆ ಕಾಡಿನಿಂದಾಚೆ ಹೋಗಲು ದಾರಿ ಕಂಡುಹಿಡಿಯಬಹುದು."

ದೋಣಿಯ ಕೆಳಭಾಗದಿಂದ ಅವನು ಒಂದಿಷ್ಟು ಹಗ್ಗವನ್ನು ತೆಗೆದ, ಒಂದು ಕೊನೆಯನ್ನು ದೋಣಿಯ ಹಿಂಭಾಗಕ್ಕೆ ಕಟ್ಟಿದ, ಇನ್ನೊಂದು ಕೊನೆಯಲ್ಲಿ ನೀರಿನಿಂದ ಕೆಲವೇ ಅಡಿಗಳ ಮೇಲೆ ಇಳಿಬಿದ್ದಿದ್ದ ಒಂದು ದಪ್ಪ ರೆಂಬೆಯ ಮೇಲೆಸೆದ. ದೋಣಿಯು ಮರದ ಕಾಂಡಕ್ಕೆ ತಗುಲಿಕೊಂಡು ನಿಂತಿತು.

ಅವತ್ತು ರಾತ್ರಿ ಕಾಡಿನ ನಿವಾಸಿಗಳೆಲ್ಲ ಓಡಾಡುತ್ತಿದ್ದವು. ಪ್ರಾಣಿಗಳೆಲ್ಲ ಪ್ರವಾಹದಿಂದಾಗಿ ತಮ್ಮ ಗೂಡುಗಳನ್ನೂ ಗುಹೆಗಳನ್ನೂ ಇಕ್ಕೆಗಳನ್ನೂ ಬಿಡಬೇಕಾಗಿ ಬಂದಿತ್ತು. ಈಗ ಅವು ಒಣನೆಲದ ಮೇಲೆ ಸುರಕ್ಷಿತ ಸ್ಥಳಗಳನ್ನು ಹುಡುಕಿಕೊಳ್ಳುತ್ತಿದ್ದವು.

ದೊಡ್ಡ ಸರ್ಪವೊಂದು ನೀರಿನ ಮೇಲೆ ತಮ್ಮ ಕಡೆಯೇ ಬರುತ್ತಿದ್ದುದನ್ನು ಸೀತೆ ಮತ್ತು ಕೃಷ್ಣ ಕಂಡರು. ಅದು ದೋಣಿಯೊಳಕ್ಕೆ ಬರಲು ಪ್ರಯತ್ನಿಸಬಹುದು ಎಂದು ಸೀತೆಗೆ ಹೆದರಿಕೆಯಾಯಿತು. ಆದರೆ ಅದು ಅವರನ್ನು ದಾಟಿ ಹೋಯಿತು, ಅದರ ತಲೆ ನೀರಿನ ಮೇಲೆ, ಅದರ ಉದ್ದ ದೇಹ ಹಿಂದೆ ಸಾಗುತ್ತ ಅದು ಕಣ್ಮರೆಯಾಯಿತು. ದೊಡ್ಡದೊಂದು ಸಾಂಬರ್ ಗಂಡು ಜಿಂಕೆಯೊಂದು ಪ್ರವಾಹಕ್ಕೆ ಎದಿರಾಗಿ ಬಂತು; ಅದು ಈಜುವ ಅಗತ್ಯವೇ ಇರಲಿಲ್ಲ; ಅದು ಎಷ್ಟು ಎತ್ತರವಾಗಿತ್ತೆಂದರೆ ಅದರ ತಲೆ ಮತ್ತು ಭುಜಗಳು ನೀರಿನಿಂದ ಸಾಕಷ್ಟು ಮೇಲಿದ್ದವು. ಅದರ ಕೊಂಬುಗಳು ದೊಡ್ಡದಾಗಿದ್ದವು, ಸುಂದರವಾಗಿದ್ದವು.

"ಇನ್ನೂ ಹಲವು ಪ್ರಾಣಿಗಳು ಬರುತ್ತವೆ" ಸೀತೆ ಎಂದಳು. "ಒಂದು ಹುಲಿಯೇ ಇರಬಹುದು; ನಾವು ಮರಹತ್ತಿ ಕುಳಿತು ಬಿಡೋಣವೇನು?"

"ದೋಣಿಯಲ್ಲಿ ನಾವು ಸುರಕ್ಷಿತವಾಗಿದ್ದೇವೆ," ಕೃಷ್ಣ ಹೇಳಿದ. "ನೀನು ಮಲಗಿಕೊ. ನಾನು ಕಾವಲು ಇರುತ್ತೇನೆ."

ಸೀತೆ ದೋಣಿಯಲ್ಲಿ ಮೈಚಾಚಿ ಕಣ್ಣು ಮುಚ್ಚಿದಳು. ದೋಣಿಯ ಪಕ್ಕಗಳಿಗೆ ಬಡಿಯುತ್ತಿದ್ದ ನೀರಿನ ಶಬ್ದ ಅವಳಿಗೆ ಜೋಗುಳದಂತೆ ನಿದ್ರೆ ಬರಿಸಿತು. ಒಂದು ವಿಚಿತ್ರ ಪಕ್ಷಿ ಮೇಲ್ಗಡೆ ಕೂಗಿದಾಗ ಒಮ್ಮೆ ಅವಳಿಗೆ ಎಚ್ಚರವಾಯಿತು. ಒಂದು ಮೊಳಕೈ ಆಧಾರಮಾಡಿಕೊಂಡು ಎದ್ದುನೋಡಿದಳು; ಕೃಷ್ಣ ದೋಣಿಯ ಮುಂಭಾಗದಲ್ಲಿ ಕುಳಿತಿದ್ದ, ಎದ್ದೇ ಇದ್ದ, ಅವಳಿಗೆ ಧೈರ್ಯಕೊಡುವಂತೆ ಮುಗುಳ್ನಗೆ ನಕ್ಕ.

ಸೀತೆಗೆ ಬೆಳಿಗ್ಗೆ ಎಚ್ಚರಿಕೆಯಾದಾಗ ಕೃಷ್ಣ ದೋಣಿಯ ಕೆಳಭಾಗದಲ್ಲಿ ನಿದ್ರೆ ಮಾಡುತ್ತಿದ್ದ. ಅಂಗಾತನಾಗಿ ಮಲಗಿದ್ದ ಅವನ ಮೇಲೆ ಎಲೆಯೊಂದು ಬಿದ್ದಿತ್ತು. ಆದರೆ ಅವನಿಗೆ ಎಚ್ಚರಿಕೆಯಾಗಿರಲಿಲ್ಲ; ಅದು, ಅಲ್ಲಿಯೇ ಬೆಳೆದಿದ್ದಂತೆ ಅವನ ಕೆನ್ನೆಯ ಮೇಲೆ ಕುಳಿತಿತ್ತು.

# ಸೀತೆ ಮತ್ತು ನದಿ

ರಸ್ಕಿನ್ ಬಾಂಡ್

ದೊಡ್ಡ ನದಿಯ ಮಧ್ಯೆ ಪರ್ವತಗಳಲ್ಲಿ ಪ್ರಾರಂಭವಾಗಿ ಸಮುದ್ರದಲ್ಲಿ ಮುಕ್ತಾಯವಾಗುವ ನದಿಯ ಮಧ್ಯೆ ಒಂದು ಸಣ್ಣ ದ್ವೀಪವಿತ್ತು. ನದಿಯು ದ್ವೀಪದ ಸುತ್ತ ವೇಗವಾಗಿ ಹರಿಯುತ್ತಿತ್ತು. ಆದರೆ ತೀರದ ಮೇಲೆ ಎಂದೂ ಹರಿಯುತ್ತಿರಲಿಲ್ಲ. ದ್ವೀಪದಲ್ಲಿ ಒಂದು ಸಣ್ಣ ಗುಡಿಸಲು; ಮಣ್ಣಿನ ಗೋಡೆಗಳ ಮತ್ತು ಇಳಿಜಾರಾದ ಹುಲ್ಲು ಚಾವಣಿಗೆಯ ಗುಡಿಸಲು. ಗುಡಿಸಲನ್ನು ಒಂದು ಬಹು ದೊಡ್ಡ ಬಂಡೆಯಲ್ಲಿ ಸೇರಿಕೊಳ್ಳುವ ಹಾಗೆ ಕಟ್ಟಿದರು. ಆದ್ದರಿಂದ ಮೂರು ಗೋಡೆಗಳು ಮಣ್ಣಿನವು, ನಾಲ್ಕನೆಯ ಗೋಡೆ ಬಂಡೆಯೇ.

ದ್ವೀಪದಲ್ಲಿ ಬೆಳೆದ ಸಣ್ಣ ಹುಲ್ಲನ್ನು ಕೆಲವು ಆಡುಗಳು ಮೇಯುತ್ತಿದ್ದವು. ಅವುಗಳ ಹಿಂದೆ ಮುಂದೆ ಕೆಲವು ಕೋಳಿಗಳು ಓಡಾಡುತ್ತಿದ್ದವು. ಒಂದು ಸಣ್ಣ ಜಾಗದಲ್ಲಿ ಕರಬೂಜ, ಇನ್ನೊಂದು ಸಣ್ಣ ಜಾಗದಲ್ಲಿ ತರಕಾರಿ ಬೆಳೆಯುತ್ತಿದ್ದವು.

ದ್ವೀಪದ ಮಧ್ಯೆ ಒಂದು ಅಶ್ವತ್ಥ ವೃಕ್ಷವಿತ್ತು.

ಅದೊಂದು ಹಳೆಯ ಮರ. ಬಹು ವರ್ಷಗಳ ಹಿಂದೆ ಗಾಳಿ ಒಂದು ಬೀಜವನ್ನು ಹೊಡೆದುಕೊಂಡು ಬಂದಿತ್ತು. ಬೀಜಕ್ಕೆ ಎರಡು ಬಂಡೆಗಳ ಮಧ್ಯೆ ಆಶ್ರಯ ದೊರೆತಿತ್ತು. ಅಲ್ಲೆ ಬೇರುಬಿಟ್ಟಿತ್ತು. ಬೆಳೆದು ಒಂದು ಸಣ್ಣ ಸಂಸಾರಕ್ಕೆ ನೆರಳನ್ನೂ ಆಶ್ರಯವನ್ನೂ ಕೊಡುತ್ತಿತ್ತು.

ಅಜ್ಜ ಒಂದು ಮೀನಿನ ಬಲೆಯನ್ನು ಸರಿಮಾಡುತ್ತಿದ್ದ. ಅವನು ಹತ್ತು ವರ್ಷಗಳ ಕಾಲ ನದಿಯಲ್ಲಿ ಮೀನು ಹಿಡಿಯುತ್ತಿದ್ದ ಸಮರ್ಥ ಬೆಸ್ತ. ತೆಳುವಾದ ಬೆಳ್ಳಿಯ 'ಚಿಲ್ವ' ಮೀನನ್ನು ಎಲ್ಲಿ ಹಿಡಿಯಬೇಕು, ದೊಡ್ಡ ಸುಂದರ 'ಮಹಸೀರ' ನ್ನು-ಎಲ್ಲಿ ಹಿಡಿಯಬೇಕು, ಉದ್ದವಾದ ಮೀಸೆಯುಳ್ಳ 'ಸಿಂಘಾರ್' ನನ್ನ ಎಲ್ಲಿ ಹಿಡಿಯಬೇಕು ಎಲ್ಲ ಅವನಿಗೆ ಗೊತ್ತಿತ್ತು. ನದಿ ಎಲ್ಲಿ ಆಳ, ಎಲ್ಲಿ ಆಳವಿಲ್ಲ, ಮೀನು ಹಿಡಿಯಲು ಯಾವ ಎರೆ ಉಪಯೋಗಿಸಬೇಕು, ಯಾವ ಮೀನಿಗೆ ಹುಳ ಇಷ್ಟ, ಯಾವುದಕ್ಕೆ ಬೇಳೆ ಇಷ್ಟ, ಎಲ್ಲ ಅವನಿಗೆ ತಿಳಿದಿತ್ತು. ಅವನು ತನ್ನ ಮಗನಿಗೂ ಮೀನು ಹಿಡಿಯುವುದನ್ನು ಹೇಳಿಕೊಟ್ಟಿದ್ದ. ಆದರೆ ಮಗ ಹತ್ತಿರ ಹತ್ತಿರ ಒಂದು ನೂರು ಮೈಲಿ ಆಚೆ ಇದ್ದ ನಗರಕ್ಕೆ ಕಾರ್ಖಾನೆಯಲ್ಲಿ ಕೆಲಸ ಮಾಡಲು ಹೊರಟುಹೋಗಿದ್ದ. ಅವನಿಗೆ ಮೊಮ್ಮಗ ಇರಲಿಲ್ಲ, ಆದರೆ ಸೀತೆ ಎನ್ನುವ ಮೊಮ್ಮಗಳಿದ್ದಳು. ಅವಳು ಗಂಡು ಹುಡುಗರು ಮಾಡುವ ಕೆಲಸವನ್ನೆಲ್ಲ ಮಾಡುತ್ತಿದ್ದಳು. ಒಮ್ಮೊಮ್ಮೆ ಅವರಿಗಿಂತ ಚೆನ್ನಾಗಿಯೇ ಮಾಡುತ್ತಿದ್ದಳು. ಅವಳು ಸಣ್ಣ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡಿದ್ದಳು. ಹುಡುಗಿಗೆ ಬರಬೇಕಾದದ್ದನ್ನೆಲ್ಲ ಅವಳ ಅಜ್ಜಿ ಕಲಿಸಿದ್ದಳು. ಆದರೆ ಅಜ್ಜನಿಗಾಗಲಿ ಅಜ್ಜಿಗಾಗಲಿ ಓದು ಬರಹ ಬರುತ್ತಿರಲಿಲ್ಲ, ಆದ್ದರಿಂದ ಸೀತೆಗೂ ಅಕ್ಷರ ಜ್ಞಾನ ಇರಲಿಲ್ಲ.

ನದಿಯಾಚೆ ಒಂದು ಶಾಲೆ ಇತ್ತು. ಆದರೆ ಸೀತೆ ಅದನ್ನು ನೋಡಿಯೇ ಇರಲಿಲ್ಲ. ಅವಳಿಗೆ ದ್ವೀಪದಲ್ಲಿ ಕೈತುಂಬ ಕೆಲಸ.

ಅಜ್ಜ ಬಲೆಯನ್ನು ಸರಿಮಾಡುತ್ತಿದ್ದಾಗ ಸೀತೆ ಗುಡಿಸಲೊಳಗಿದ್ದಳು. ಅಜ್ಜಿಗೆ ಜ್ವರ ಬಂದು ಹಣೆ ಎಲ್ಲ ಬಿಸಿಯಾಗಿತ್ತು, ಸೀತೆ ಹಣೆ ಒತ್ತುತ್ತಿದ್ದಳು. ಅಜ್ಜಿಗೆ ಮೂರು ದಿನಗಳಿಂದ ಖಾಯಿಲೆ. ಏನನ್ನೂ ತಿನ್ನಲು ಆಗುತ್ತಿರಲಿಲ್ಲ. ಹಿಂದೆಯೂ ಅವಳಿಗೆ ಖಾಯಿಲೆ ಆಗಿತ್ತು, ಆದರೆ ಇಷ್ಟು ಖಾಯಿಲೆ ಆಗಿರಲಿಲ್ಲ.

ಅಜ್ಜಿಗೆ ನಿದ್ರೆ ಬಂತು ಎನ್ನುವುದನ್ನು ಗಮನಿಸಿದಾಗ ಸೀತೆ ಸದ್ದಿಲ್ಲದೆ ತುದಿಗಾಲಲ್ಲಿ ನಡೆದುಕೊಂಡು ಹೋಗಿ ಹೊರಗೆ ನಿಂತಳು.

ಮಳೆಗಾಲದ ಮೋಡಗಳಿಂದ ಆಕಾಶ ಕಪ್ಪಾಗಿತ್ತು. ಇಡೀ ರಾತ್ರಿ ಮಳೆ ಬಂದಿತ್ತು, ಕೆಲವು ಗಂಟೆಗಳಲ್ಲಿ ಮತ್ತೆ ಮಳೆ ಬರುವುದರಲ್ಲಿತ್ತು. ಆ ವರ್ಷ ಮಳೆ ಬೇಗನೇ ಬಂದಿತ್ತು. ಜೂನ್ ತಿಂಗಳ ಕೊನೆಯಲ್ಲಿ ಬಂದಿತ್ತು ಈಗ ಜುಲೈ ಕೊನೆಯ ಭಾಗ, ಆಗಲೇ ನದಿಯ ನೀರು ಏರಿತ್ತು. ಅದು ಮುನ್ನುಗ್ಗುವ ಸದ್ದು ಎಂದಿಗಿಂತ ಹತ್ತಿರ ಇದ್ದಂತೆ ಅಪಾಯಕರವಾಗಿದ್ದಂತೆ ಕಾಣುತ್ತಿತ್ತು.

ಸೀತೆ ಅಜ್ಜನ ಹತ್ತಿರ ಹೋಗಿ ಅವನ ಜೊತೆಗೆ ಅಶ್ವತ್ಥ ವೃಕ್ಷದ ಕೆಳಗೆ ಕುಳಿತಳು.

"ನಿನಗೆ ಹಸಿವಾದಾಗ ಹೇಳು," ಅವಳೆಂದಳು, "ರೊಟ್ಟಿ ಮಾಡಿಕೊಡುತ್ತೇನೆ."

"ನಿಮ್ಮ ಅಜ್ಜಿಗೆ ನಿದ್ರೆ ಬಂದಿದೆಯೆ?"

"ನಿದ್ರೆ ಮಾಡುತ್ತಿದ್ದಾಳೆ. ಆದರೆ ಅವಳಿಗೆ ತುಂಬಾ ನೋವಿದೆ, ಆದ್ದರಿಂದ ಸ್ವಲ್ಪ ಹೊತ್ತಿನಲ್ಲೆ ಎಚ್ಚರ ಆಗಿಬಿಡುತ್ತದೆ."

ಮುದುಕ ನದಿಯಾಚೆ ದಿಟ್ಟಿಸಿ ನೋಡಿದ. ಕಾಡಿನ ಹಸಿರು ಮರಗಳ ಕಡೆ, ಕಪ್ಪಾಗಿದ್ದ ಆಕಾಶದ ಕಡೆ ನೋಡುತ್ತ ಹೇಳಿದ, "ನಾಳೆಯ ಹೊತ್ತಿಗೆ ಅವಳಿಗೆ ಗುಣವಾಗದಿದ್ದರೆ ಅವಳನ್ನ ಷಾಗಂಜಿನ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತೇನೆ. ಅವಳನ್ನು ಗುಣ ಮಾಡುವುದು ಹೇಗೆ ಅಂತ ಅವರಿಗೆ ತಿಳಿದಿರುತ್ತೆ. ಕೆಲವು ದಿನ ನೀನೊಬ್ಬಳೇ ಇರಬೇಕಾಗಬಹುದು."

ಸೀತೆ ಗಂಭೀರವಾಗಿ ತಲೆ ಆಡಿಸಿದಳು. ಅಜ್ಜಿಗೆ ಗುಣವಾಗುವುದು ಅವಳಿಗೆ ಬೇಕಾಗಿತ್ತು; ಪ್ರವಾಹ ಅಷ್ಟು ಬಲವಾಗಿದ್ದಾಗ ಸಣ್ಣ ದೋಣಿಯಲ್ಲಿ ನದಿಯನ್ನು ದಾಟಲು ಅಜ್ಜನೊಬ್ಬನಿಗೇ ಬರುವುದು ಎಂದು ಅವಳಿಗೆ ಗೊತ್ತಿತ್ತು. ಅವರಿಗಿದ್ದ ಚೂರುಪಾರು ಸಾಮಾನುಗಳನ್ನು ನೋಡಿಕೊಳ್ಳಲು ಯಾರಾದರೂ ಗುಡಿಸಿಲಿನಲ್ಲಿ ಇರಬೇಕಾಗಿತ್ತು.

ಒಬ್ಬಳೇ ಇರಲು ಸೀತೆಗೆ ಹೆದರಿಕೆ ಏನೂ ಇರಲಿಲ್ಲ. ಆದರೆ ನದಿಯ ರೀತಿ ನೋಡಿ ಅವಳಿಗೆ ಆತಂಕವಾಗುತ್ತಿತ್ತು. ಸಾಮಾನ್ಯವಾಗಿ ನೀರಿನ ಪಕ್ಷಿಗಳ ಹಿಕ್ಕೆಗಳಿಂದ ಚಿತ್ತಾಗಿರುತ್ತಿದ್ದ ಬಂಡೆಗಳು ಇದ್ದಕ್ಕಿದ್ದಂತೆ ಮಾಯವಾಗಿದ್ದವು.

"ಅಜ್ಜ, ನದಿಯಲ್ಲಿ ನೀರು ಏರಿದರೆ ನಾನೇನು ಮಾಡಬೇಕು?"

"ಎತ್ತರದ ಜಾಗದಲ್ಲಿರು."

"ಎತ್ತರದ ಜಾಗದವರೆಗೂ ನೀರು ಏರಿದರೆ?"

"ಕೋಳಿಗಳನ್ನೂ ಕರೆದುಕೊಂಡು ಗುಡಿಸಿಲಿನ ಒಳಕ್ಕೆ ಹೋಗಿ ಅಲ್ಲಿಯೇ ಇರು."

"ಗುಡಿಸಿಲಿನ ಒಳಕ್ಕೂ ನೀರು ನುಗ್ಗಿದರೆ?"

"ಆಗ ಅಶ್ವತ್ಥ ಮರವನ್ನು ಹತ್ತಿಬಿಡು. ಅದು ಗಟ್ಟಿಯಾದ ಮರ, ಬೀಳುವುದಿಲ್ಲ, ನೀರು ಅಷ್ಟು ಎತ್ತರಕ್ಕೆ ಏರುವುದಿಲ್ಲ."

"ಆಡುಗಳನ್ನೇನು ಮಾಡುವುದು, ಅಜ್ಜ?"

"ಅವನ್ನ ನಾನು ಕರಕೊಂಡು ಹೋಗ್ತೇನೆ, ಸೀತ. ನಿಮ್ಮ ಅಜ್ಜಿಯ ಆಹಾರ, ಔಷಧ ಎಲ್ಲಕ್ಕೂ ಹಣ ಬೇಕಲ್ಲ. ಅದಕ್ಕೆ ಆಡುಗಳನ್ನ ಮಾರಬೇಕಾಗಬಹುದು. ಅಗತ್ಯವಾದರೆ ಕೋಳಿಗಳನ್ನ ಚಾವಣಿ ಮೇಲೆ ಇಡು." ಅವಳ ತಲೆ ಸವರುತ್ತ ಅಜ್ಜ ಹೇಳಿದ, "ತುಂಬಾ ಚಿಂತಿಸಬೇಡ, ನೀರು ಅಷ್ಟು ಎತ್ತರಕ್ಕೆ ಬರುವುದಿಲ್ಲ."

* * *

ಅವತ್ತು ಸಂಜೆ ಮತ್ತೆ ಮಳೆ ಪ್ರಾರಂಭವಾಯಿತು. ನದಿಯ ಮೇಲ್ಮೈ ಮೇಲೆ ಕರೆ ಬೀಳುವಂತೆ ಮಳೆಯ ದೊಡ್ಡ ದೊಡ್ಡ ಹನಿಗಳು. ಆದರೆ ಮಳೆ ನೀರು ಬೆಚ್ಚಗಿತ್ತು, ಸೀತೆ ಅದರಲ್ಲೆ ಓಡಾಡಬಹುದಾಗಿತ್ತು. ಅವಳಿಗೆ ಒದ್ದೆಯಾಗುವ ಭಯ ಇರಲಿಲ್ಲ, ಅದೂ ಅವಳಿಗೆ ಇಷ್ಟವೇ. ಮನೆಯೊಳಗೆ ಆವಿ ಇತ್ತು, ಅಡುಗೆ ಮನೆಯ ಉರಿಯಲ್ಲಿ ಅವಳ ತೆಳು ಬಟ್ಟೆ ಬೇಗ ಒಣಗುತ್ತಿತ್ತು.

ಕಡೆಗೂ ಅವನಿಗೆ ಎಚ್ಚರಿಕೆಯಾಯಿತು. ಅವನು ಎದ್ದ, ಆಕಳಿಸಿದ, ಮೈಮುರಿದ, ಎದ್ದು ಸೀತೆಯ ಪಕ್ಕವೇ ಕುಳಿತ.

"ನೀರು ಇನ್ನೂ ಮೇಲಕ್ಕೆ ಬಂದಿಲ್ಲ," ಅವನು ಹೇಳಿದ, "ಆದರೆ ನನಗೆ ಹಸಿವಾಗುತ್ತದೆ."

"ನನಗೂ ಹಸಿವು" ಸೀತೆ ಎಂದಳು.

"ಇವೇ ಕಡೆಯ ಮಾವಿನ ಹಣ್ಣುಗಳು" - ಬುಟ್ಟಿಯಿಂದ ಉಳಿದಿದ್ದ ಎರಡು ಮಾವಿನ ಹಣ್ಣುಗಳನ್ನು ಹೊರಕ್ಕೆ ತೆಗೆಯುತ್ತ ಅವನು ಹೇಳಿದ.

ಹಣ್ಣುಗಳನ್ನು ಅವರು ತಿಂದು ಮುಗಿಸಿದ ಮೇಲೆ ಕೃಷ್ಣ ದೋಣಿಯನ್ನು ಮರಗಳ ಮಧ್ಯೆ ನಡೆಸಿದ. ಆಮೇಲೆ ಒಂದು ಗಂಟೆ ಕಾಲ ಅವರು ಪ್ರವಾಹ ತುಂಬಿ ಬಂದು ಈಗ ಇಳಿಮುಖವಾಗಿದ್ದ ಕಾಡಿನ ಮಧ್ಯೆ ತೇಲಿ ಹೋದರು. ಮಳೆಯಲ್ಲಿ ಮಿಂದ ಮರಗಳ ರೆಂಬೆಗಳಿಂದ ನೀರ ಹನಿಗಳು ಅವರ ಮೇಲೆ ಉದುರುತ್ತಿದ್ದವು. ಒಮ್ಮೊಮ್ಮೆ ಅವರು ಬಳ್ಳಿಗಳನ್ನೂ ರೆಂಬೆಗಳನ್ನೂ ನಿವಾರಿಸಲು ಹುಟ್ಟುಗಳನ್ನು ಬಳಸಬೇಕಾಗಿತ್ತು. ಒಮ್ಮೊಮ್ಮೆ ನೀರಿನಲ್ಲಿ ಮುಳುಗಿದ್ದ ಪೊದೆಗಳು ಅವರಿಗೆ ಅಡ್ಡಿಯಾದವು. ಆದರೆ ಮಧ್ಯಾಹ್ನವಾಗುವ ಹೊತ್ತಿಗೆ ಕಾಡಿನಿಂದ ಹೊರಕ್ಕೆ ಬಂದಿದ್ದರು.

ದೂರದಲ್ಲಿ ಅವರಿಗೆ ಎತ್ತರವಾದ ಪ್ರದೇಶದಲ್ಲಿ ಕಟ್ಟಿದ್ದ ಹಳ್ಳಿಯೊಂದು ಕಾಣಿಸಿತು. ನೀರು ನಿಂತ ಹೊಲಗಳಲ್ಲಿ ದೋಣಿಯನ್ನು ತೆಗೆದುಕೊಂಡು ಹೋದಂತೆ ನೀರಿನ ಆಳವೂ ಕಡಮೆಯಾಗುತ್ತ ಹೋಯಿತು.

ಹಳ್ಳಿಯ ಜನ ಸಹಾಯ ಮಾಡಿದರು, ವಿಶ್ವಾಸ ತೋರಿದರು. ಸೀತೆಗೂ ಕೃಷ್ಣನಿಗೂ ಆಹಾರ, ಇರಲು ಸ್ಥಳ ಕೊಟ್ಟರು. ಸೀತೆಗೆ ತನ್ನ ಅಜ್ಜ ಅಜ್ಜಿಯರನ್ನು ಕಾಣುವ ತವಕ; ಷಾಗಂಜಿನಲ್ಲಿ ಕೆಲಸವಿದ್ದ ವೃದ್ಧ ರೈತನೊಬ್ಬ ಅವಳನ್ನು ಕರೆದುಕೊಂಡು ಹೋಗುವೆನೆಂದ. ಕೃಷ್ಣ ತನ್ನ ಜೊತೆಗೆ ಬಂದಾನು ಎಂದು ಸೀತೆಯ ಆಸೆ; ಆದರೆ ತನ್ನ ಮನೆಯವರೂ ಮತ್ತು ಇತರ ಜನರೂ ಸ್ವಲ್ಪ ಕಾಲದಲ್ಲೆ ಹಳ್ಳಿಗೆ ಬರುತ್ತಾರೆ ಎಂದು ಹುಡುಗನಿಗೆ ಗೊತ್ತಿತ್ತು. ತಾನು ಅಲ್ಲೆ ಕಾಯುವುದಾಗಿ ಹೇಳಿದ.

"ಈಗ ನಿನಗೆ ಎಲ್ಲ ಸರಿಹೋಗುತ್ತದೆ," ಅವನು ಹೇಳಿದ, "ಆದಷ್ಟು ಬೇಗ ನೀನು ನಿನ್ನ ಅಜ್ಜನನ್ನು ಹುಡುಕಿಕೊಳ್ಳಬೇಕು, ಎರಡುಮೂರು ದಿನಗಳಲ್ಲಿ ನೀರು ಇಳಿಯುತ್ತದೆ, ನೀನು ದ್ವೀಪಕ್ಕೆ ಹಿಂದಿರುಗಿ ಹೋಗ ಬಹುದು."

"ಅಲ್ಲಿ ಇನ್ನೂ ದ್ವೀಪ ಉಳಿದಿದ್ದರೆ," ಸೀತೆ ಎಂದಳು.

ಅವಳು ರೈತನ ಎತ್ತಿನ ಗಾಡಿಯಲ್ಲಿ ಹತ್ತುತ್ತಿರುವಾಗ ಕೃಷ್ಣ ಅವಳಿಗೊಂದು ಕೊಳಲನ್ನು ಕೊಟ್ಟ.

"ನನಗೋಸ್ಕರ ಇದನ್ನು ಇಟ್ಟುಕೊ," ಅವನು ಹೇಳಿದ. "ಒಂದು ದಿನ ಅದಕ್ಕಾಗಿ ನಾನು ಬರುತ್ತೇನೆ." ಅವಳು ಅನುಮಾನಿಸುತ್ತಿದ್ದಾಗ ಅವನೆಂದ, "ಸೊಗಸಾದ ಕೊಳಲು ಇದು!"

* * *

ಎತ್ತಿನ ಗಾಡಿಯ ಪ್ರಯಾಣ ನಿಧಾನವಾಯಿತು. ಹಳ್ಳಿಯ ರಸ್ತೆಗಳು ಮಾಯವೇ ಆಗಿಬಿಟ್ಟಿದ್ದವು, ಚಕ್ರಗಳು ಮಣ್ಣಿನಲ್ಲಿ ಹೂತುಕೊಳ್ಳುತ್ತಿದ್ದವು. ರೈತನೂ ಬೆಳೆದ ಅವನ ಮಗನೂ ಸೀತೆಯೂ ಆ ದೊಡ್ಡ ಕಿರುಗುಟ್ಟುವ ಮರದ ಚಕ್ರಗಳನ್ನು ಬಿಡಿಸಲು ಮತ್ತೆಮತ್ತೆ ಕೆಳಗಿಳಿದು ಮೇಲೆತ್ತಿ ನೂಕಬೇಕಾಗುತ್ತಿತ್ತು. ಎತ್ತುಗಳ ಮೈಮೇಲೆಲ್ಲ ಕೆಸರಿನ ಗುರುತುಗಳು; ಸೀತೆಯ ಕಾಲುಗಳ ಮೇಲೆ ಕೆಸರು ಒಣಗಿ ಬಿಲ್ಲೆಗಳಾಗಿಬಿಟ್ಟಿತ್ತು.

ಷಾಗಂಜ್ ತಲುಪಲು ಒಂದು ಹಗಲು, ಒಂದು ರಾತ್ರಿಯನ್ನು ಅವರು ಎತ್ತಿನ ಗಾಡಿಯಲ್ಲೆ ಕಳೆಯ ಬೇಕಾಯಿತು; ಆ ಹೊತ್ತಿಗೆ, ಬಹು ಚಟುವಟಿಕೆಗಳ ಆ ಸಂತೆಯೂರಿನ ಅಗಲವಿಲ್ಲದ ಅಂಗಡಿಬೀದಿಯಲ್ಲಿ ನಡೆಯುತ್ತಿದ್ದ ಸೀತೆ ಗುರುತೇ ಸಿಕ್ಕದಂತಾಗಿದ್ದಳು.

ಅಜ್ಜನಿಗೆ ಅವಳ ಗುರುತೇ ಸಿಕ್ಕಲಿಲ್ಲ. ತನ್ನ ಮುಂದಕ್ಕೆ ನೋಡುತ್ತ ಅವನು ಕಷ್ಟಪಟ್ಟು ನಡೆಯುತ್ತಿದ್ದ. ಧೂಳು ತುಂಬಿ ಕೂದಲು ಕೆದರಿಕೊಂಡ ಆ ಹುಡುಗಿ ನೇರವಾಗಿ ಅವನ ಕಡೆಗೆ ಅವನ ಕೃಶವಾದ,

ನಡುಗುತ್ತಿದ್ದ ಕಾಲುಗಳತ್ತ ಓಡಿ ಅವನ ನಡುವನ್ನು ತಬ್ಬಿಕೊಳ್ಳದೆ ಹೋಗಿದ್ದರೆ ಅವನು ನೆಟ್ಟಗೆ ಮುಂದಕ್ಕೆ ಹೊರಟುಹೋಗಿರುತ್ತಿದ್ದ

ಬೀಳುವಂತಾದವರು ಸಾವರಿಸಿಕೊಂಡು ಮತ್ತೆ ಉಸಿರಾಡುವಂತಾದಾಗ ಅವನು "ಸೀತಾ!" ಎಂದು ಕೂಗಿಬಿಟ್ಟ. "ಹೇಗಿದ್ದೀಯೆ? ದ್ವೀಪವನ್ನು ಬಿಟ್ಟು ಏಕೆ ಬಂದೆ? ಹೇಗೆ ಅಲ್ಲಿಂದ ಹೊರಟೆ? ನನಗೆ ತುಂಬಾ ಚಿಂತೆಯಾಗಿತ್ತು - ಈ ಎರಡು ದಿನಗಳೂ ಕೆಟ್ಟ ದಿನಗಳೇ...."

"ಅಜ್ಜಿ?" ಸೀತೆ ಕೇಳಿದಳು.

ಆ ಮಾತನ್ನು ಹೇಳುವಾಗಲೇ ಅವಳಿಗೆ, ತನ್ನ ಅಜ್ಜಿ ತಮ್ಮ ಜೊತೆಗಿಲ್ಲ ಎಂದು ಅರ್ಥವಾಗಿಬಿಟ್ಟಿತು. ಮುದುಕನ ಕಣ್ಣಿನ ದಿಗ್ಭ್ರಮೆಯ ನೋಟವೇ ಅವಳಿಗೆ ಅದನ್ನು ಹೇಳಿತು. ಅವಳಿಗೆ ಅಳುವಂತಾಯಿತು — ಅಜ್ಜಿಗಾಗಿ ಅಲ್ಲ, ಅವಳಿಗಿನ್ನು ಯಾತನೆ ಇರಲಿಲ್ಲ. ಆದರೆ ಅಜ್ಜನಿಗಾಗಿ, ನಿಸ್ಸಹಾಯನಾಗಿ ದಿಗ್ಭ್ರಮೆಯಾಗಿದ್ದ ಅಜ್ಜನಿಗಾಗಿ ಅಳುವಂತಾಯಿತು. ಆದರೆ ಅವಳು ಕಣ್ಣೀರನ್ನು ತಡೆದುಕೊಂಡಳು. ಸೊಟ್ಟಸೊಟ್ಟನಾಗಿ ನಡುಗುತ್ತಿದ್ದ ಅವನ ಕೈಯನ್ನು ಹಿಡಿದುಕೊಂಡು ಜನರಿಂದ ತುಂಬಿಹೋಗಿದ್ದ ರಸ್ತೆಯಲ್ಲಿ ಕರೆದುಕೊಂಡು ಹೋದಳು. ಆಗ ಅವಳಿಗೆ ಗೊತ್ತಾಯಿತು ಬರಲಿದ್ದ ವರ್ಷಗಳಲ್ಲಿ ಅವನು ಒರಗಿ ಆಶ್ರಯಪಡೆಯುವುದು ತನ್ನ ಭುಜಕ್ಕೆ ಎಂದು.

ಕೆಲವು ದಿನಗಳ ನಂತರ ನದಿಯ ಪ್ರವಾಹ ಪೂರ್ತಿ ಇಳಿದಮೇಲೆ, ಅವರು ದ್ವೀಪಕ್ಕೆ ಹಿಂದಿರುಗಿದರು. ಮಳೆ ಇನ್ನೂ ಬಂತು, ಆದರೆ ಕಷ್ಟದ ಕಾಲ ಕಳೆದುಹೋಗಿತ್ತು. ಅಜ್ಜನ ಹತ್ತಿರ ಇನ್ನೂ ಎರಡು ಆಡುಗಳು ಉಳಿದಿದ್ದವು; ಒಂದಕ್ಕಿಂತ ಹೆಚ್ಚನ್ನು ಮಾರುವುದು ಅಗತ್ಯವಾಗಲಿಲ್ಲ.

ಅಶ್ವತ್ಥಮರ ದ್ವೀಪದಿಂದ ಮಾಯವಾಗಿದ್ದುದನ್ನು ಕಂಡಾಗ ಅವನಿಗೆ ತನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ — ಆ ಮರ ದ್ವೀಪದ ಬಂಡೆಗಳಷ್ಟೇ ಶಾಶ್ವತ ಎಂದು ಕಾಣುತ್ತಿತ್ತು, ನದಿಯಷ್ಟೇ ಅವರ ಬದುಕಿನ ಭಾಗ ವಾಗಿ ಹೋಗಿತ್ತು. ಸೀತೆ ತಪ್ಪಿಸಿಕೊಂಡ ರೀತಿಯನ್ನು ಕೇಳಿ ಅವನು ಬೆರಗಾದ.

"ಮರ ನಿನ್ನನ್ನು ಉಳಿಸಿತು," ಅವನೆಂದ.

"ಮತ್ತು ಆ ಹುಡುಗ," ಸೀತೆ ಹೇಳಿದಳು.

ಅವಳು ಆ ಹುಡುಗನನ್ನು ಜ್ಞಾಪಿಸಿಕೊಂಡಳು. ಮತ್ತೆ ನಾನು ಅವನನ್ನು ನೋಡುತ್ತೇನೆಯೇ ಎಂದು ಯೋಚಿಸಿದಳು. ಆದರೆ ಅವನ ವಿಷಯ ಮತ್ತೆ ಮತ್ತೆ ಯೋಚಿಸಲಿಲ್ಲ, ಏಕೆಂದರೆ ಮಾಡಬೇಕಾದ ಕೆಲಸ ಬೇಕಾದಷ್ಟಿತ್ತು.

ಗೋಣಿಚೀಲಗಳಿಂದ ಒಂದು ಒಡ್ಡೊಡ್ಡಾದ ನೆಲೆಯನ್ನು ಮಾಡಿಕೊಂಡು ಅಲ್ಲಿ ಮೂರು ಹಗಲು ರಾತ್ರಿಗಳನ್ನು ಅವರು ಕಳೆದರು. ಹಗಲೆಲ್ಲ ಅವಳು ಗುಡಿಸಲನ್ನು ಮತ್ತೆ ಕಟ್ಟಲು ಅಜ್ಜನಿಗೆ ನೆರವಾದಳು. ಅವಳು ಅಷ್ಟು ಎಚ್ಚರದಿಂದ ತುಂಬಿದ್ದ ಪೆಟ್ಟಿಗೆ ನೀರಿನಲ್ಲಿ ಕೊಚ್ಚಿ ಹೋಗಿರಲಿಲ್ಲ, ಆದರೆ ಅದರಲ್ಲಿ ನೀರು ಹೋಗಿ ಬಿಟ್ಟಿತ್ತು; ಆಹಾರ ಮತ್ತು ಬಟ್ಟೆ ಕೆಟ್ಟು ಹೋಗಿತ್ತು. ಆದರೆ ಅಜ್ಜನ ಹುಕ್ಕಗೆ ಏನೂ ಆಗಿರಲಿಲ್ಲ, ಸಂಜೆಯ ಹೊತ್ತು, ಅವರ ಕೆಲಸ ಮುಗಿದ ಮೇಲೆ ಸೀತೆ ಸಿದ್ಧಪಡಿಸಿದ ಲಘು ಊಟದ ನಂತರ, ಅವನು ಹಿಂದೆ ಅವನಿಗಿದ್ದ ಸಂತೃಪ್ತಿಯಲ್ಲಿ ಸ್ವಲ್ಪ ಭಾಗವನ್ನಾದರೂ ಅನುಭವಿಸುತ್ತ ಅದನ್ನು ಸೇದುತ್ತಿದ್ದ

ಅಶ್ವತ್ಥ ಮರ ಇದ್ದೆಡೆಯೇ ಸೀತೆ ಮಾವಿನ ಓಟೆಗಳನ್ನು ಹಾಕಿದಳು. ಅದು ದೊಡ್ಡ ಮರವಾಗಲು ಬಹು ವರ್ಷಗಳೇ ಆಗಬೇಕಾಗಿತ್ತು. ಎಂದಾದರೊಂದು ದಿನ ತಾನು ಅದರ ರೆಂಬೆಗಳಲ್ಲಿ ಕುಳಿತು ಮಾವಿನ ಹಣ್ಣುಗಳನ್ನು ಖುಷಿಯಾಗಿ ತಿನ್ನುವ ಕನಸುಕಾಣುವುದು ಸೀತೆಗೆ ಬಹು ಇಷ್ಟ!

ನಿಧಾನವಾಗಿ ಮಳೆ ಕೊನೆಗೊಂಡಿತು. ಹಳ್ಳಿಗಳಲ್ಲಿ ಜನ ಮತ್ತೆ ನೆಲವನ್ನು ಉತ್ತು ಚಳಿಗಾಲದ ತಿಂಗಳುಗಳಿಗಾಗಿ ಹೊಸ ಬೆಳೆ ಬೆಳೆಯುವ ಕೆಲಸವನ್ನು ಪ್ರಾರಂಭಿಸಿದರು. ದನದ ಜಾತ್ರೆಗಳು, ಕುಸ್ತಿ ಪಂದ್ಯಗಳು ನಡೆದವು. ಶಾಖದ ಸೆಖೆಯ ದಿನಗಳು ಅವು. ನದಿಯ ನೀರು ಬಗ್ಗಡವಾಗಿರಲಿಲ್ಲ; ಒಂದು ಸಂಜೆ ಅಜ್ಜ ಒಂದು 'ಮಹಸೀರ್' ಮೀನನ್ನು ಹಿಡಿದ. ಸೀತೆ ಅದರಿಂದ ರುಚಿಯಾದ ಪಲ್ಯ ಮಾಡಿದಳು.

* * *

ಅಜ್ಜ ಹುಕ್ಕಾ ಸೇದುತ್ತ ಗುಡಿಸಿಲಿನ ಹೊರಗೆ ಕುಳಿತಿದ್ದ. ಸೀತೆ ದ್ವೀಪದ ಆಚೆ ಅಂಚಿನಲ್ಲಿ ಬಟ್ಟೆಗಳನ್ನು ಒಣಗಲು ಬಂಡೆಗಳ ಮೇಲೆ ಹರವುತ್ತಿದ್ದಳು.

ಅವಳ ಹಿಂದೆ ಮೃದುವಾಗಿ ಹೆಜ್ಜೆಯ ಸಪ್ಪಳವಾಯಿತು. ಅವಳು ತಿರುಗಿ ನೋಡಿದಳು. ಅವಳ ಹಿಂದೆ ನಿಂತು ಕೃಷ್ಣ ಮುಗುಳ್ನಗೆ ನಗುತ್ತಿದ್ದ.

"ನೀನು ಬರುವುದಿಲ್ಲ ಎಂದುಕೊಂಡಿದ್ದೆ," ಸೀತೆ ಹೇಳಿದಳು.

"ನಮ್ಮ ಹಳ್ಳಿಯಲ್ಲಿ ಬಹಳ ಕೆಲಸ ಇತ್ತು. ನನ್ನ ಕೊಳಲನ್ನು ಇಟ್ಟುಕೊಂಡಿದ್ದೀಯ?"

"ಹೌದು, ಆದರೆ ಅದನ್ನು ಸರಿಯಾಗಿ ನುಡಿಸಲು ನನಗೆ ಬರುವುದಿಲ್ಲ"

"ನಾನು ನಿನಗೆ ಹೇಳಿಕೊಡುತ್ತೇನೆ," ಕೃಷ್ಣ ಹೇಳಿದ.

ಅವನು ಅವಳ ಪಕ್ಕದಲ್ಲಿ ಕುಳಿತುಕೊಂಡ. ಈಗ ತಿಳಿಯಾಗಿ ಆಕಾಶದ ನೀಲಿಯನ್ನು ಪ್ರತಿಬಿಂಬಿಸುತ್ತಿದ್ದ ನೀರಿನಲ್ಲಿ ಅವರು ತಮ್ಮ ಪಾದಗಳನ್ನು ತಂಪು ಮಾಡಿಕೊಂಡರು. ನದಿಯ ತಳದ ಮರಳು ಮತ್ತು ಕಲ್ಲುಗಳು ಅವರಿಗೆ ಕಾಣಿಸುತ್ತಿದ್ದವು.

"ಒಮ್ಮೊಮ್ಮೆ ನದಿ ಸಿಟ್ಟು ಮಾಡಿಕೊಳ್ಳುತ್ತದೆ, ಒಮ್ಮೊಮ್ಮೆ ಮೃದು ಮನಸ್ಸಿನದಾಗುತ್ತದೆ," ಸೀತೆ ಎಂದಳು.

"ನಾವು ನದಿಯ ಭಾಗ," ಕೃಷ್ಣ ಹೇಳಿದ.

ಅದೊಂದು ಒಳ್ಳೆಯ ನದಿ; ಆಳವಾದ, ಶಕ್ತವಾದ ನದಿ; ಬೆಟ್ಟಗಳ ನಡುವೆ ಹುಟ್ಟಿ ಸಮುದ್ರದಲ್ಲಿ ಕೊನೆ ಕಾಣುವ ನದಿ.

ಅದರ ತೀರದ ಮೇಲೆ, ನೂರಾರು ಮೈಲಿಯುದ್ದಕ್ಕೂ ಲಕ್ಷಾಂತರ ಜನರು ವಾಸಿಸುತ್ತಿದ್ದರು. ಸೀತೆ ಏನಿದ್ದರೂ ಅವರ ನಡುವೆ ಒಬ್ಬ ಪುಟ್ಟ ಹುಡುಗಿ. ಯಾರೂ ಅವಳ ವಿಷಯ ಕೇಳಿರಲಿಲ್ಲ, ಯಾರಿಗೂ ಅವಳ ಪರಿಚಯ ಇರಲಿಲ್ಲ — ಆ ಮುದುಕ, ಆ ಹುಡುಗ ಮತ್ತು ನದಿಯ ಹೊರತಾಗಿ.

# ಅದಲ್ - ಬದಲ್
## (ಅದಲು - ಬದಲು)

### ಪನ್ನಲಾಲ್ ಪಟೇಲ್

ಹೋಳಿ ಹಬ್ಬದ ಮುಸ್ಸಂಜೆ. ಬೇವಿನ ಮರವೊಂದರ ಕೆಳಗೆ ಗುಂಪುಸೇರಿದ್ದ ಹಳ್ಳಿಯ ಬಾಲಕರು ಒಬ್ಬರ ಮೇಲೊಬ್ಬರು ಮಣ್ಣೆರಚುತ್ತ ಆಡುತ್ತಿದ್ದರು.

ಅಮೃತ್ ಮತ್ತು ಇಸಬ್ ಕೈಕೈ ಸೇರಿಸಿಕೊಂಡು ನಡೆಯುತ್ತ ಬಂದು ಅವರನ್ನು ಸೇರಿದರು. ಅವರಿಬ್ಬರೂ ಅವತ್ತು ತಾನೆ ಹೊಲಿಸಿದ ಉಡುಪುಗಳನ್ನು ಹಾಕಿಕೊಂಡಿದ್ದರು; ಇಬ್ಬರ ಬಟ್ಟೆಗಳೂ ಒಂದೇ ತರ - ಬಣ್ಣ ಅಳತೆ, ತಯಾರಿಸಿದ ವಸ್ತು ಎಲ್ಲ ಒಂದೇ. ಅವರಿಬ್ಬರೂ ಒಂದೇ ತರಗತಿಯಲ್ಲಿದ್ದರು, ಒಂದೇ ಶಾಲೆ, ರಸ್ತೆಯ ಮೂಲೆಯಲ್ಲಿ ಎದುರುಬದರಿದ್ದ ಮನೆಗಳಲ್ಲಿ ವಾಸ. ಆ ಹುಡುಗರ ತಂದೆತಾಯಿಯರು ರೈತರು, ಅವರ ಜಮೀನುಗಳ ವಿಸ್ತಾರ ಸ್ವಲ್ಪ ಹೆಚ್ಚು ಕಡಿಮೆ ಒಂದೇ; ಕಷ್ಟಕಾಲ ಬಂದಾಗ ಸುಧಾರಿಸಲು ಸಾಹುಕಾರನ ಹತ್ತಿರ ಸಾಲ ತೆಗೆದುಕೊಳ್ಳುವರು. ಕೆಲವೇ ಮಾತಿನಲ್ಲಿ ಹೇಳುವುದಾದರೆ, ಆ ಇಬ್ಬರು ಹುಡುಗರು ಎಲ್ಲ ರೀತಿಗಳಲ್ಲೂ ಒಂದೇ; ವ್ಯತ್ಯಾಸವೆಂದರೆ ಅಮೃತನಿಗೆ ತಂದೆ-ತಾಯಿ ಮತ್ತು ಮೂರು ಜನ ಸಹೋದರರು ಇದ್ದರು, ಇಸಬ್‌ಗೆ ತಂದೆ ಮಾತ್ರ ಇದ್ದದ್ದು.

ಇಬ್ಬರು ಹುಡುಗರೂ ಬಂದು ರಸ್ತೆಯಂಚಿನಲ್ಲಿ ಕುಳಿತರು. ಅವರು ಒಂದೇ ಬಗೆಯ ಉಡುಪುಗಳನ್ನು ಹಾಕಿಕೊಂಡಿದ್ದುದನ್ನು ನೋಡಿ ಒಬ್ಬ ಹುಡುಗ, "ಹೇ ಅಮೃತ್, ನಿಮ್ಮ ವ್ಯಕ್ತಿತ್ವಗಳನ್ನೂ ಬದಲಾಯಿಸಿಕೊಂಡಿದ್ದೀರೇನೋ!" ಎಂದು ಕೇಳಿದ.

ಈ ಮಾತು ಮತ್ತೊಬ್ಬ ಹುಡುಗನಿಗೆ ಒಂದು ತುಂಟ ಆಲೋಚನೆಯನ್ನು ತಂದುಕೊಟ್ಟಿತು. "ನೀವಿಬ್ಬರೂ ಕುಸ್ತಿಪಂದ್ಯವನ್ನೇಕೆ ಆಡಬಾರದು? ನೀವಿಬ್ಬರೂ ಶಕ್ತಿಯಲ್ಲೂ ಒಂದೇ ಸಮನಿದ್ದೀರೊ ಅಥವಾ ಒಬ್ಬ ಇನ್ನೊಬ್ಬನಿಗಿಂತ ಗಟ್ಟಿಯೋ ಗೊತ್ತಾಗತ್ತೆ" ಎಂದ.

ಮೊದಲನೆ ಹುಡುಗನಿಗೆ ಇದು ಒಳ್ಳೆಯ ಯೋಚನೆ ಎನ್ನಿಸಿತು. "ಹೌದು ಅಮೃತ್, ಇಬ್ಬರಲ್ಲಿ ಯಾರು ಯಾರನ್ನ ಸೋಲಿಸ್ತೀರಿ ನೋಡೋಣ" ಎಂದ.

"ಬನ್ನಿ!" ಇನ್ನೊಬ್ಬ ಹುಡುಗ ಎಂದ, "ಇದು ಬರೀ ತಮಾಷೆಗೆ ಅಷ್ಟೆ."

ಇಸಬ್ ಅಮೃತನ ಕಡೆ ನೋಡಿದ. ಅಮೃತ್ ದೃಢವಾಗಿ ಹೇಳಿದ, "ಊಹುಂ, ನಮ್ಮಮ್ಮ ನನ್ನ ಚಚ್ಚಿಬಿಡ್ತಾರೆ ಅಷ್ಟೆ."

ಅವನ ಭಯಕ್ಕೆ ಸರಿಯಾದ ಕಾರಣವೂ ಇತ್ತು. ಅವನು ಮನೆಯಿಂದ ಹೊರಟಾಗ ಅವರಮ್ಮ ಎಚ್ಚರಿಕೆ ಹೇಳಿದ್ದರು, "ಹೊಸಾ ಬಟ್ಟೆ ಬೇಕು ಅಂತ ಅಷ್ಟು ಗಲಾಟೆ ಮಾಡಿದಿ! ಅದನ್ನೇನಾದರೂ ಹರಿದುಕೊಂಡರೆ ಅಥವಾ ಕೊಳೆ ಮಾಡಿಕೊಂಡರೆ ನಿನಗೇನಾಗತ್ತೆ ನಿನಗೆ ಗೊತ್ತಲ್ಲ!"

ಅಮೃತ ತನ್ನ ತಂದೆತಾಯಿಗಳನ್ನ ಗೋಳುಹೊಯ್ದುಕೊಂಡಿದ್ದದ್ದು ನಿಜ. ಇಸಬ್‌ಗೆ ಹೊಸ ಷರ್ಟು ಬರುತ್ತದೆ ಅಂತ ಕೇಳಿದಾಗ ಇಸಬ್‌ನ ಷರ್ಟಿನಂತಹದೇ ಷರ್ಟನ್ನ ತನಗೂ ಹೊಲಿಸಬೇಕು, ಇಲ್ಲದೆ ಹೋದರೆ ನಾನು ಶಾಲೆಗೆ ಹೋಗುವುದಿಲ್ಲ ಎಂದು ಹಠಮಾಡಿದ. ಅವನ ತಾಯಿ ಕಾರಣಕೊಟ್ಟು ಅವನೊಡನೆ ವಾದ

ಮಾಡಲು ಪ್ರಯತ್ನಿಸಿದಳು. "ಮಗೂ, ಇಸಬ್ ಹೊಲದಲ್ಲಿ ಕೆಲಸ ಮಾಡಬೇಕು, ಅವನ ಬಟ್ಟೆಗಳು ಹಳೆಯದಾಗಿ ಹೋಗಿವೆ. ನಿನ್ನ ಬಟ್ಟೆಗಳು ಹೊಸದರಂತೆಯೇ ಇವೆ."

"ಯಾರು ಹಾಗೆ ಹೇಳೋರು?" ತನ್ನ ಷರ್ಟಿನಲ್ಲಿ ಒಂದು ತೂತನ್ನು ಬೆರಳಿನಿಂದ ಅಗಲಮಾಡುತ್ತ ಅಮೃತ ಹೇಳಿದ್ದ.

ಅವನ ತಾಯಿ ಇನ್ನೊಂದು ಬಗೆಯ ಪ್ರಯತ್ನ ಮಾಡಿದಳು. "ಇಸಬ್‌ಗೆ ಹೊಸ ಬಟ್ಟೆ ಕೊಡಿಸುವ ಮೊದಲು ಅವರಪ್ಪ ಚೆನ್ನಾಗಿ ಅವನನ್ನ ಚಚ್ಚಿದರು. ನೀನೂ ಹೊಡೆತ ತಿಂತೀಯ?"

ಅಮೃತ ಪಟ್ಟು ಬಿಡಲಿಲ್ಲ "ಆಗಲಿ," ಲಕ್ಷಿಸದೆ ಅವನು ಹೇಳಿದ "ನನ್ನನ್ನ ಕಟ್ಟಿ ಹಾಕಿ! ಚೆನ್ನಾಗಿ ಬಡಿಯಿರಿ! ಆದರೆ ಇಸಬ್‌ನ ಷರ್ಟಿನಂತಹದೇ ಷರ್ಟ್‌ನ್ನ ನನಗೆ ಕೊಡಿಸಬೇಕು."

ಅವನ ಸುದ್ದಿಯನ್ನು ಬಿಡುತ್ತ ಅವರಮ್ಮ ಹೇಳಿದಳು. "ಸರಿ, ಹೋಗಿ ನಿಮ್ಮ ತಂದೆಯವರನ್ನ ಕೇಳು."

ತಾಯಿ ಒಪ್ಪದಿದ್ದರೆ ತಂದೆ ಒಪ್ಪುವುದು ಕಠಿಣ ಎಂದು ಅಮೃತನಿಗೆ ಗೊತ್ತಿತ್ತು. ಆದರೆ ಪ್ರಯತ್ನವನ್ನು ಬಿಡುವವನಲ್ಲ ಅವನು. ಶಾಲೆಗೆ ಹೋಗುವುದಿಲ್ಲ ಎಂದ, ಏನನ್ನೂ ತಿನ್ನುವುದಿಲ್ಲ ಎಂದ, ರಾತ್ರಿ ಮನೆಗೆ ಬರುವುದಿಲ್ಲ ಎಂದ. ಕಡೆಗೆ ಅವರಮ್ಮನೇ ಒಪ್ಪಿಕೊಂಡಳು. ಅವನಿಗೆ ಹೊಸ ಬಟ್ಟೆ ಕೊಡಿಸಲು ಅವನ ತಂದೆಯನ್ನೂ ಒಪ್ಪಿಸಿದಳು. ಇಸಬನ ತಂದೆಯ ಹಸುಗಳ ಕೊಟ್ಟಿಗೆಯಲ್ಲಿ ಬಚ್ಚಿಟ್ಟುಕೊಂಡಿದ್ದ ಅಮೃತನನ್ನು ಕರೆದುಕೊಂಡು ಬಂದಳು.

ಚಾಲೂಕಾಗಿ ಉಡುಪು ಹಾಕಿಕೊಂಡು ಮನೆಯಿಂದ ಹೊರಟ ಅಮೃತನಿಗೆ ಅದನ್ನು ಹಾಳುಮಾಡಿ ಕೊಳ್ಳುವಂತಹದೇನನ್ನೂ ಮಾಡಲು ಮನಸ್ಸಿರಲಿಲ್ಲ. ಅಲ್ಲದೆ ಇಸಬನ ಜೊತೆಗೆ ಕುಸ್ತಿ ಮಾಡುವುದು ಅವನಿಗೆ ಬೇಕೇ ಇರಲಿಲ್ಲ.

ಆ ಹೊತ್ತಿಗೆ ಸರಿಯಾಗಿ ಆ ಗುಂಪಿನ ರೌಡಿಯೊಬ್ಬ ಅಮೃತನ ಕುತ್ತಿಗೆಯ ಸುತ್ತ ಕೈಹಾಕಿ, "ಬಾ, ಕುಸ್ತಿ ಪಂದ್ಯ ಆಡೋಣ" ಎಂದ. ಅವನು ಅಮೃತನನ್ನು ಬಯಲಿಗೆ ಎಳೆದುಕೊಂಡು ಹೋದ.

ಅಮೃತ ಆ ಹುಡುಗನ ಕೈಯಿಂದ ಬಿಡಿಸಿಕೊಳ್ಳಲು ಹೆಣಗುತ್ತ, "ನೋಡಪ್ಪ ಕಲಿಯ, ನನಗೆ ಕುಸ್ತಿ ಮಾಡಲು ಇಷ್ಟವಿಲ್ಲ, ನನ್ನ ಪಾಡಿಗೆ ನನ್ನನ್ನ ಬಿಡು."

ಕಲಿಯ ಬಿಡಲಿಲ್ಲ, ಅಮೃತನನ್ನು ನೆಲಕ್ಕೆ ಬೀಳಿಸಿದ. ಹುಡುಗರು ಖುಷಿಯಿಂದ, "ಅಮೃತ ಸೋತ, ಕಲಿಯ ಗೆದ್ದ! ಕಲಿಯ ಗೆದ್ದ! ಹುರಾ, ಹುರಾ" ಎಂದು ಕೂಗಿಕೊಂಡರು.

ಇಸಬ್‌ಗೆ ಕೋಪ ಬಂದಿತು. ಅವನು ಕಲಿಯನ ಕೈಹಿಡಿದು, "ಬಾ ನಾನು ನಿನ್ನ ಜೊತೆಗೆ ಕುಸ್ತಿ ಮಾಡುತ್ತೇನೆ" ಎಂದ.

ಕಲಿಯ ಅನುಮಾನಿಸಿದ. ಆದರೆ ಇತರ ಹುಡುಗರು ಅವನಿಗೆ ಉತ್ತೇಜನ ಕೊಟ್ಟರು. ಹುಡುಗರಿಬ್ಬರೂ ಒಬ್ಬರನ್ನೊಬ್ಬರು ಹಿಡಿದು ಎಳೆದಾಡಿದರು. ಇಸಬ್ ಕಲಿಯನಿಗೆ ಕಾಲುಕೊಟ್ಟು ಬೀಳಿಸಿ ಅವನು ನೆಲದ ಮೇಲೆ ಕೈಕಾಲು ಚಾಚಿಕೊಂಡು ಉರುಳುವಂತೆ ಮಾಡಿದ. ಕಲಿಯ ಅರಚಿಕೊಳ್ಳಲು ಪ್ರಾರಂಭಿಸಿದ.

ತಮಾಷೆಯಾಗಿ ಪ್ರಾರಂಭವಾದದ್ದು ಪ್ರಮಾದವೇ ಆಯಿತೆಂದು ಹುಡುಗರಿಗೆ ಅರ್ಥವಾಯಿತು. ಕಲಿಯನ ತಂದೆ ತಾಯಿ ಬಂದು ತಮ್ಮನ್ನು ಹೊಡೆಯಬಹುದೆಂದು ಹೆದರಿ ಅವರು ದಿಕ್ಕಾಪಾಲಾಗಿ ಓಡಿದರು.

ಅಮೃತ್ ಮತ್ತು ಇಸಬ್ ಕುಸ್ತಿಯ ಅಂಕಣವನ್ನು ಬಿಟ್ಟರು. ಅವರಿನ್ನೂ ಕೆಲವೇ ಹೆಜ್ಜೆ ಹೋಗುವುದರಲ್ಲಿ ಅಮೃತ್‌ನ ಕಣ್ಣು ಇಸಬ್‌ನ ಷರ್ಟಿನ ಕಡೆ ಹೋಯಿತು. ಅದರ ಜೇಬು ಮತ್ತು ಆರಂಗುಲ ಪಟ್ಟಿ ಹರಿದುಹೋಗಿದ್ದವು. ಗಾಬರಿಯಾಗಿ ಅವರು ಇದ್ದಕಡೆಯೇ ನಿಂತುಬಿಟ್ಟರು. ಷರ್ಟಿನಲ್ಲಿ ಹರಿದುಹೋಗಿದ್ದ ಭಾಗಗಳನ್ನು ಪರೀಕ್ಷಿಸಿದರು. ಈ ಕಷ್ಟವೇ ಸಾಲದೆನ್ನುವ ಹಾಗೆ ಇಸಬ್‌ನ ತಂದೆ ಮನೆಯಿಂದ "ಇಸಬ್ ಎಲ್ಲಿ?" ಎಂದು ಕೂಗಾಡುತ್ತಿದ್ದುದು ಕೇಳಿಸಿತು.

ಹುಡುಗರ ಹೃದಯಗಳ ಬಡಿತವೇ ನಿಂತುಹೋಯಿತು. ನಮಗೆ ಗ್ರಹಚಾರ ವಕ್ಕರಿಸಿತು ಎಂದು ಅವರಿಗೆ

ಅರ್ಥವಾಯಿತು. ಇಸಬ್‌ನ ಷರ್ಟನ್ನು ನೋಡುತ್ತಲೇ ಅವನ ತಂದೆ ಅವನ ಚರ್ಮ ಸುಲಿದು ಬಿಡುವರು. ಅವರು ಬಡ್ಡಿಗೆ ಸಾಲಕೊಡುವವನೊಬ್ಬನ ಹತ್ತಿರ ಸಾಲಮಾಡಿ, ಬಟ್ಟೆ ಆರಿಸುವುದಕ್ಕೆ ಮತ್ತು ಅದನ್ನು ಹೊಲಿಸುವುದಕ್ಕೆ ಬಹಳ ಸಮಯ ತೆಗೆದುಕೊಂಡಿದ್ದರು.

ಮತ್ತೆ ಇಸಬ್‌ನ ತಂದೆ ಕೂಗಿದರು, "ಯಾರದು ಅಳುತ್ತಿರುವುದು? ಇಸಬ್ ಎಲ್ಲಿ?"

ಥಟ್ಟನೆ ಅಮೃತನಿಗೊಂದು ಯೋಚನೆ ಹೊಳೆಯಿತು. ಅವನು ಇಸಬ್‌ನನ್ನು ಒಂದು ಪಕ್ಕಕ್ಕೆ ಕರೆದುಕೊಂಡು ಹೋದ. "ನನ್ನ ಜೊತೆಗೆ ಬಾ" ಎಂದ. ಎರಡು ಮನೆಗಳ ನಡುವೆ ಒಂದು ಓಣಿಯೊಳಕ್ಕೆ ಹೋದಾಗ, "ಬಾ, ನಿನ್ನ ಷರ್ಟನ್ನು ತೆಗಿ. ನನ್ನದನ್ನು ಹಾಕಿಕೊ," ಎಂದ.

"ನೀನೇನು ಮಾಡುತ್ತಿ? ಏನನ್ನು ಹಾಕಿಕೊಳ್ಳುತ್ತಿ?" ಇಸಬ್ ಕೇಳಿದ.

"ನಾನು ನಿನ್ನ ಷರ್ಟನ್ನು ಹಾಕಿಕೊಳ್ಳುತ್ತೇನೆ," ಅಮೃತ ಉತ್ತರಿಸಿದ. "ಯಾರಾದರೂ ನೋಡಿಬಿಟ್ಟಾರು, ಜಾಗ್ರತೆ ಮಾಡು."

ಇಸಬ್ ತನ್ನ ಷರ್ಟಿನ ಗುಂಡಿಗಳನ್ನು ಬಿಚ್ಚಲು ಪ್ರಾರಂಭಿಸಿದ, ಆದರೆ ಅಮೃತ ಏನು ಮಾಡಬೇಕೆಂದಿದ್ದಾನೆ ಎಂದು ಅರ್ಥವಾಗಲಿಲ್ಲ. "ಷರ್ಟುಗಳನ್ನ ಅದಲು ಬದಲಿ ಮಾಡಿಕೊಳ್ಳೋದೇ? ಅದರಿಂದ ಏನು ಪ್ರಯೋಜನ? ನಿಮ್ಮಪ್ಪ ನಿನಗೆ ಚೆನ್ನಾಗಿ ಹೊಡೀತಾರೆ."

"ಹೌದು ಅವರು ಚೆನ್ನಾಗಿ ಹೊಡೀತಾರೆ. ಆದರೆ ನನ್ನನ್ನ ಬಿಡಿಸೋದಕ್ಕೆ ನನಗೆ ಅಮ್ಮ ಇದಾರೆ,"ಅಮೃತ ಉತ್ತರಿಸಿದ.

ಅಮೃತನ ತಂದೆ ಅವನನ್ನು ಹೊಡೆಯಬೇಕೆಂದಿದ್ದಾಗ ಅಮೃತ ತನ್ನ ತಾಯಿಯ ಹಿಂದೆ ಬಚ್ಚಿಟ್ಟುಕೊಂಡಿದ್ದನ್ನು ಇಸಬ್ ಎಷ್ಟೋ ಬಾರಿ ನೋಡಿದ್ದ. ಅವನ ತಾಯಿಯಿಂದ ಕೆನ್ನೆಗೆ ಒಂದೆರಡು ಏಟನ್ನು ಅವನು ತಿನ್ನಬೇಕಾಯಿತು, ನಿಜ. ಆದರೆ ಅಪ್ಪನ ಬಲವಾದ ಕೈಗೆ ಹೋಲಿಸಿದರೆ ಅಮ್ಮನ ಮೃದುವಾದ ಏಟು ಏನು ಮಹಾ?

ಇಸಬ್ ಅನುಮಾನಿಸಿದ. ಅಷ್ಟು ಹೊತ್ತಿಗೆ ಹತ್ತಿರವೇ ಯಾರೋ ಕೆಮ್ಮಿದ ಶಬ್ದ ಕೇಳಿಸಿತು. ಹುಡುಗರು ಸರಸರನೆ ಷರ್ಟುಗಳನ್ನು ಬದಲಾಯಿಸಿಕೊಂಡರು. ಓಣಿಯಿಂದ ಹೊರಕ್ಕೆ ಬಂದರು ಮತ್ತು ಅಳುತ್ತ ಮನೆಯತ್ತ ನಡೆದರು.

ಅಮೃತನ ಎದೆ ಹೆದರಿಕೆಯಿಂದ ಡಬಡಬನೆ ಹೊಡದುಕೊಳ್ಳುತ್ತಿತ್ತು. ಆದರೆ ಅವನ ಅದೃಷ್ಟ ಚೆನ್ನಾಗಿತ್ತು. ಅವತ್ತು ಹೋಳಿ. ಅವತ್ತು ಒಂದಿಷ್ಟು ಒರಟಾಟ ನಡೆಯುವುದು ಸಹಜವೇ. ಹರಿದುಹೋಗಿದ್ದ ಅವನ ಷರ್ಟನ್ನು ನೋಡಿ ಅವನ ತಾಯಿ ಹುಬ್ಬುಗಂಟು ಹಾಕಿದಳು. ಆದರೂ ಕ್ಷಮಿಸಿಬಿಟ್ಟಳು. ಸೂಜಿದಾರವನ್ನು ತೆಗೆದುಕೊಂಡು ಹರಿದಿದ್ದ ಷರ್ಟನ್ನು ಹೊಲಿದಳು.

ಹುಡುಗರು ತಮ್ಮ ಹೆದರಿಕೆಯನ್ನು ಮರೆತರು, ಹಳ್ಳಿಯ ಹೊರಗಿನ ಹೋಳಿಹಬ್ಬದ ಉರಿಯನ್ನು ನೋಡಲು ಕೈಯಲ್ಲಿ ಕೈ ಹಾಕಿಕೊಂಡು ಹೊರಟರು.

ಅವರು ಷರ್ಟುಗಳನ್ನು ಬದಲಾಯಿಸಿಕೊಂಡಿದ್ದುದನ್ನು ಗಮನಿಸಿದ್ದ ಒಬ್ಬ ಹುಡುಗ, "ನೀವು ಷರ್ಟ್‌ಗಳನ್ನ ಅದಲು ಬದಲು ಮಾಡಿಕೊಂಡಿದ್ದೀರಿ, ಅಲ್ವ?" ಎಂದು ಕೇಳಿ ತಮಾಷೆಯನ್ನು ಹಾಳು ಮಾಡಿಬಿಟ್ಟ.

ಆ ಹುಡುಗ ತಾವು ಷರ್ಟುಗಳನ್ನು ಅದಲುಬದಲು ಮಾಡಿಕೊಂಡಿದ್ದನ್ನು ನೋಡಿಬಿಟ್ಟಿರಬೇಕು ಎಂದು ಹೆದರಿ ಅಮೃತ ಮತ್ತು ಇಸಬ್ ಯಾರಿಗೂ ಕಾಣದಂತೆ ಜಾರಿಕೊಳ್ಳಲು, ಪ್ರಯತ್ನಿಸಿದರು. ಅಷ್ಟು ಹೊತ್ತಿಗೆ ಇತರ ಹುಡುಗರಿಗೂ ಏನಾಯಿತೆಂದು ತಿಳಿಯಿತು, ಅವರು "ಅದಲ್-ಬದಲ್" "ಅದಲ್-ಬದಲ್" ಎಂದು ಒಟ್ಟಾಗಿ ಹಾಡಲಾರಂಭಿಸಿದರು.

ಇಬ್ಬರು ಹುಡುಗರೂ ಕಣ್ತಪ್ಪಿಸಿ ಹೊರಟು ಹೋಗಲು ಪ್ರಯತ್ನ ಮಾಡಿದರು, ಆದರೆ ಘಟಿಂಗ ಹುಡುಗರ ತಂಡವು "ಅದಲ್-ಬದಲ್", "ಅದಲ್-ಬದಲ್" ಎಂದು ಕೂಗುತ್ತ ಅವರನ್ನ ಹಿಂಬಾಲಿಸಿತು. ನಡೆದ ವಿಷಯ ತಮ್ಮ ತಂದೆಯವರ ಕಿವಿಗೆ ಬಿದ್ದೀತೆಂದು ಹೆದರಿ ಇಬ್ಬರು ಸ್ನೇಹಿತರು ತಮ್ಮ ಮನೆಗಳ ಕಡೆಗೆ ಓಡಿದರು

ಇಸಬ್‌ನ ತಂದೆ ಹುಕ್ಕ ಸೇದುತ್ತ ಮನೆಯಮುಂದಿನ ಅಂಗಳದಲ್ಲಿ ಮಂಚದ ಮೇಲೆ ಕುಳಿತಿದ್ದರು. ಅವರು ಹುಡುಗರಿಗೆ, "ನಿಮ್ಮ ಗೆಳೆಯರಿಂದ ಯಾಕೆ ಓಡಿಹೋಗ್ತೀರಿ? ಇಲ್ಲಿ ಬಂದು ನನ್ನ ಹತ್ತಿರ ಕುಳಿತುಕೊಳ್ಳಿ" ಎಂದು ಅಪ್ಪಣೆ ಮಾಡಿದರು.

ಅವರ ಮೃದುಧ್ವನಿಯಿಂದ ಹುಡುಗರಿಗೆ ಆತಂಕವಾಯಿತು. ಅವರಿಗೆ "ನಾವು ಭಯಪಟ್ಟ ಹಾಗೆಯೇ ಆಯಿತು. ಇವರಿಗೆ ನಿಜ ಸಂಗತಿ ಗೊತ್ತಾಗಿಬಿಟ್ಟಿದೆ, ಮೃದುವಾಗಿರುವ ಹಾಗೆ ನಟಿಸ್ತಾ ಇದ್ದಾರೆ" ಎನ್ನಿಸಿತು.

ಇಸಬ್‌ನ ತಂದೆ, ಅವರೊಬ್ಬ ಪಠಾಣ, ಹತ್ತುವರ್ಷದ ಅಮೃತನನ್ನು ತೋಳಿನಲ್ಲಿ ಎತ್ತಿಕೊಂಡರು. "ವಹಲಿ ಭಾಬಿ, ಇವತ್ತಿಂದ ನಿಮ್ಮ ಮಗ ಅಮೃತ ನನ್ನ ಮಗ" ಎಂದು ಗಟ್ಟಿಯಾಗಿ ಹೇಳಿದರು.

ವಹಲಿ ಭಾಬಿ ಮನೆಯಿಂದ ಹೊರಕ್ಕೆ ಬಂದರು. ಆಕೆ ನಕ್ಕು "ಹಸನ್ ಭಾಯಿ, ನಿಮಗೆ ಒಬ್ಬ ಮಗನನ್ನು ನೋಡಿಕೊಳ್ಳುವುದಕ್ಕೂ ಆಗೋದಿಲ್ಲ, ಇಬ್ಬರನ್ನ ಹೇಗೆ ನಿಭಾಯಿಸ್ತೀರಿ?" ಎಂದರು.

ಭಾವೋದ್ವೇಗದಿಂದ ಹಸನ್‌ಗೆ ಮಾತನಾಡುವುದೇ ಕಷ್ಟವಾಯಿತು. "ವಹಲಿ ಭಾಬಿ, ಇವತ್ತಿನಿಂದ ಇಪ್ಪತ್ತೊಂದು ಮಕ್ಕಳನ್ನು ಸಾಕಿಯೇನು ಅವರೆಲ್ಲ ಅಮೃತನ ಹಾಗಿದ್ದರೆ," ಎಂದರು.

ಗಂಟಲನ್ನು ಸರಿಮಾಡಿಕೊಂಡು ಇಸಬನ ತಂದೆ, ಹುಡುಗರಿಬ್ಬರೂ ಓಣಿಯೊಳಕ್ಕೆ ಹೋದುದನ್ನ ನೋಡಿದೆನೆಂದು ವಹಲಿ ಭಾಬಿಗೆ ಹೇಳಿದರು. "ಹುಡುಗರು ಏನು ಮಾಡುತ್ತಾರೆ ಅಂತ ನೋಡಲು ತೀರ್ಮಾನಿಸಿದೆ" ಎಂದರು.

ಪಠಾಣರು ಏನು ಹೇಳುತ್ತಿದ್ದಾರೆ ಎಂದು ಕೇಳಲು ನೆರೆಹೊರೆಯ ಇತರ ಹೆಂಗಸರೂ ಸೇರಿದರು.

ಅವರು ಹೇಳುವುದಕ್ಕೆ ಹೆಚ್ಚು ಕಾಲವೇನೂ ಬೇಕಾಗಲಿಲ್ಲ. ಹುಡುಗರು ಷರ್ಟುಗಳನ್ನ ಬದಲಾಯಿಸಿಕೊಂಡಿದ್ದನ್ನು ಹೇಳಿ ಅವರು, "ಇಸಬ್ ಅಮೃತನನ್ನ 'ನಿಮ್ಮ ಅಪ್ಪ ನಿನ್ನ ಹೊಡೆದರೆ ಏನು ಮಾಡ್ತಿ?' ಅಂತ ಕೇಳಿದ. ನಮ್ಮ ಅಮೃತ ಏನು ಉತ್ತರ ಹೇಳಿದ ಗೊತ್ತೆ? 'ನನಗೆ ಅಮ್ಮ ಇದ್ದಾಳೆ' ಅಂದ."

ಪಠಾಣನ ಕಣ್ಣುತುಂಬ ನೀರು. ಅವರು ಹೇಳಿದರು, "ಎಷ್ಟು ಸತ್ಯ! ಅಮೃತನ ಉತ್ತರ ನನ್ನನ್ನ ಬದಲಾಯಿಸಿಬಿಟ್ಟಿದೆ. ನಿಜವಾಗಿ ಯಾವುದಕ್ಕೆ ಬೆಲೆ ಕೊಡಬೇಕು ಅನ್ನೋದನ್ನ ಅವನು ನನಗೆ ಹೇಳಿಕೊಟ್ಟ."

ಅಮೃತ, ಇಸಬರ ಪ್ರೀತಿಯ ಕಥೆಯನ್ನು ಕೇಳಿ ಹೆಂಗಸರಿಗೂ ಮನಸ್ಸು ಕರಗಿತು.

ಅಷ್ಟು ಹೊತ್ತಿಗೆ ಹೋಳಿಯ ಖುಷಿ ಉರಿಯಿಂದ ಹಿಂದಕ್ಕೆ ಬರುತ್ತಿದ್ದ ಹುಡುಗರು ಅಮೃತ ಮತ್ತು ಇಸಬರನ್ನ ಸುತ್ತಿಕೊಂಡರು. ಅವರು, "ಅಮೃತ್-ಇಸಬ್, ಅದಲ್-ಬದಲ್, ಭಾಯ್ ಅದಲ್-ಬದಲ್" ಎಂದು ಹಾಡಲು ಪ್ರಾರಂಭಿಸಿದರು.

ಈ ಬಾರಿ ಅಮೃತ ಮತ್ತು ಇಸಬಗೆ ಆತಂಕವಾಗಲಿಲ್ಲ. ಅದರ ಬದಲು ಅದಲ್-ಬದಲ್ ಎನ್ನಿಸಿಕೊಳ್ಳುವುದಕ್ಕೆ ಅವರಿಗೆ ಸಂತೋಷವೇ ಆಯಿತು.

ಅದಲ್-ಬದಲ್ ಕಥೆ ಹಳ್ಳಿಯಲ್ಲೆಲ್ಲ ಹಬ್ಬಿತು. ಅದು ಹಳ್ಳಿಯ ಪಟೇಲನನ್ನೂ ತಲುಪಿತು; ಅವನು, "ಇವತ್ತಿನಿಂದ ಅಮೃತನನ್ನ ಅದಲ್ ಅಂತ, ಇಸಬ್‌ನನ್ನ ಬದಲ್ ಅಂತ ಕರೆಯೋಣ" ಎಂದ.

ಹುಡುಗರಿಗೆ ಖುಷಿಯಾಯಿತು. ಸ್ವಲ್ಪ ಹೊತ್ತಿನಲ್ಲೆ ಹಳ್ಳಿಯಲ್ಲಿ ಮಾತ್ರವಲ್ಲ, ಆಕಾಶವೆಲ್ಲ, "ಅಮೃತ್-ಇಸಬ್, ಅದಲ್-ಬದಲ್, ಅದಲ್-ಬದಲ್!" ಎನ್ನುವ ಕೂಗಿನಿಂದ ತುಂಬಿಹೋಯಿತು.

# ಕವಣೆ ಇಟ್ಟುಕೊಂಡಿದ್ದ ಹುಡುಗ

ಭಿಷಂ ಸಹಾನಿ

ಶಾಲೆಯಲ್ಲಿ ನಮ್ಮ ತರಗತಿಯಲ್ಲಿ ವಿಚಿತ್ರ ತರಹದ ಹುಡುಗರಿದ್ದರು. ಹರ್ಬನ್ಸ್ ಲಾಲ್ ಇದ್ದ - ಕಷ್ಟವಾದ ಪ್ರಶ್ನೆ ಕೇಳಿದರೆ, ಶಾಯಿ ಕುಡಿಕೆಯಿಂದ ಒಂದು ಗುಟುಕು ಕುಡಿಯುತ್ತಿದ್ದ. ಏಕೆಂದರೆ ಅದರಿಂದ ಬುದ್ಧಿ ಚುರುಕಾಗುತ್ತದೆ ಎಂದು ಅವನ ನಂಬಿಕೆ. ಮೇಷ್ಟ್ರು ಕಪಾಳಕ್ಕೆ ಹೊಡೆದರೆ, 'ಅಯ್ಯೋ ಕೊಲ್ತಾರೆ! ಸಹಾಯ ಮಾಡಿ!' ಎಂದು ಎಷ್ಟು ಗಟ್ಟಿಯಾಗಿ ಕಿರುಚುತ್ತಿದ್ದನೆಂದರೆ ಇತರ ತರಗತಿಗಳಿಂದ ಉಪಾಧ್ಯಾಯರುಗಳೂ ಹುಡುಗರೂ ಏನಾಯಿತೋ ಎಂದು ನೋಡಲು ಓಡಿ ಬರುತ್ತಿದ್ದರು. ಇದರಿಂದ ಮೇಷ್ಟ್ರಿಗೇ ಸಂಕೋಚವಾಗುತ್ತಿತ್ತು. ಉಪಾಧ್ಯಾಯರು ಅವನಿಗೆ ಬೆತ್ತದಿಂದ ಹೊಡೆಯಲು ಯತ್ನಿಸಿದರೆ ಅವರ ಸುತ್ತ ತೋಳು ಬಳಸಿ, "ಮಹಾಪ್ರಭೊ, ನನ್ನನ್ನು ಕ್ಷಮಿಸಿ! ತಾವು ಅಕ್ಬರ ಮಹಾಶಯನ ಹಾಗೆ. ನೀವೇ ಅಶೋಕ ಚಕ್ರವರ್ತಿ. ನೀವೇ ನನ್ನ ತಂದೆ, ಅಜ್ಜ, ಮುತ್ತಜ್ಜ" ಎಂದು ಬೇಡಿಕೊಳ್ಳುವನು.

ಇದರಿಂದ ಇತರ ಹುಡುಗರು ಮುಸಿಮುಸಿ ನಗುವರು, ಉಪಾಧ್ಯಾಯರಿಗೆ ಮುಖ ಕೆಡುವುದು. ಈ ಹರ್ಬನ್ಸ್ ಲಾಲ್ ಕಪ್ಪೆಗಳನ್ನು ಹಿಡಿಯುತ್ತಿದ್ದ; ನಮಗೆ, "ನೀವು ಕಪ್ಪೆಯ ಕೊಬ್ಬನ್ನು ಕೈಗೆ ಸವರಿಕೊಂಡರೆ ಮೇಷ್ಟರ ಬೆತ್ತದ ಏಟು ತಿಳಿಯುವುದೇ ಇಲ್ಲ" ಎಂದು ಹೇಳುತ್ತಿದ್ದ.

ಆದರೆ ಅತ್ಯಂತ ವಿಚಿತ್ರದ ಹುಡುಗ ಬೋಧರಾಜ. ನಮಗೆಲ್ಲ ಅವನನ್ನು ಕಂಡರೆ ಹೆದರಿಕೆ. ಅವನು ಯಾರ ತೋಳನ್ನಾದರೂ ಚಿವುಟಿದರೆ ಅದು ಹಾವು ಕಚ್ಚಿದ ಹಾಗೆ ಊದುತ್ತಿತ್ತು. ಅವನು ಮಹಾ ಒರಟ, ಯಾವುದೂ ಲಕ್ಷ್ಯವಿಲ್ಲ, ಕಣಜ ಹುಳುವನ್ನು ಬರೀ ಬೆರಳಲ್ಲಿ ಹಿಡಿಯುವನು, ಅದರ ಮುಳ್ಳನ್ನು ಕಿತ್ತು ಅದಕ್ಕೊಂದು ದಾರ ಕಟ್ಟಿ ಗಾಳಿಪಟದ ಹಾಗೆ ಹಾರಿಸುವನು. ಹೂವಿನ ಮೇಲೆ ಕುಳಿತ ಚಿಟ್ಟೆಯನ್ನು ಹಿಡಿದು ಅದನ್ನು ತನ್ನ ಬೆರಳುಗಳ ಮಧ್ಯೆ ಜಜ್ಜಿ ಬಿಡುವನು, ಇಲ್ಲವೇ ಅದಕ್ಕೊಂದು ಗುಂಡುಸೂಜಿ ಚುಚ್ಚಿ ತನ್ನ ನೋಟ್‌ಪುಸ್ತಕದಲ್ಲಿ ಇಟ್ಟುಕೊಳ್ಳುವನು.

ಬೋಧಿರಾಜನಿಗೇನಾದರೂ ಚೇಳು ಕಚ್ಚಿದರೆ ಚೇಳೇ ಸತ್ತು ಬೀಳುತ್ತದೆ ಎಂದು ಹೇಳುತ್ತಿದ್ದರು; ಬೋಧಿರಾಜನ ರಕ್ತದಲ್ಲಿ ಎಷ್ಟೊಂದು ವಿಷ ಎಂದರೆ ಹಾವು ಕಚ್ಚಿದರೂ ಅವನಿಗೆ ಏನೂ ಆಗುತ್ತಿರಲಿಲ್ಲ ಎಂದು ನಂಬಿಕೆ ಇತ್ತು. ಯಾವಾಗಲೂ ಅವನ ಕೈಯಲ್ಲಿ ಒಂದು ಕವಣೆ ಇರುತ್ತಿತ್ತು ಮತ್ತು ಅವನದು ಬಹು ಸೊಗಸಾದ ಗುರಿ. ಅವನಿಗೆ ಪಕ್ಷಿಗಳನ್ನು ಹೊಡೆಯುವುದೆಂದರೆ ಬಹು ಇಷ್ಟ. ಮರದ ಕೆಳಗೆ ನಿಂತು ಗುರಿ ಇಡುವನು, ಮರುಕ್ಷಣ ಹಕ್ಕಿಯ ಕೂಗು ಗಾಳಿಯನ್ನು ತುಂಬುವುದು, ಮತ್ತು ಗರಿಗಳ ಮುದ್ದೆ ತೇಲಿಕೊಂಡು ಕೆಳಕ್ಕಿಳಿಯುವುದು. ಅಥವಾ ಅವನು ಒಂದು ಮರವನ್ನೇರಿ ಮೊಟ್ಟೆಗಳನ್ನೆಲ್ಲ ತೆಗೆದುಕೊಂಡುಬಿಡುವನು, ಗೂಡನ್ನೇ ನಾಶಮಾಡಿ ಬಿಡುವನು.

ಅವನು ಬಹು ಛಲಗಾರ, ಇತರರಿಗೆ ನೋವನ್ನು ಮಾಡುವುದೆಂದರೆ ಅವನಿಗೆ ಖುಷಿ. ಹುಡುಗರಿಗೆಲ್ಲ ಅವನೆಂದರೆ ನಡುಕ. ಅವನ ತಾಯಿಯೂ ಅವನನ್ನು 'ರಾಕ್ಷಸ' ಎಂದು ಕರೆಯುತ್ತಿದ್ದರು. ಅವನ ಜೇಬುಗಳು ವಿಚಿತ್ರ ವಸ್ತುಗಳಿಂದ ದಪ್ಪಗಿರುತ್ತಿದ್ದವು - ಒಂದು ಜೀವಂತ ಗಿಣಿ, ಹಲವು ಬಗೆಯ ಮೊಟ್ಟೆಗಳು ಅಥವಾ ಕೈಗೆ ಚುಚ್ಚುವ ಮುಳ್ಳು ಹಂದಿ ಇಂತಹವು.

ಬೋಧಿರಾಜ ಯಾರ ಜೊತೆಗಾದರೂ ಜಗಳವಾಡಿದರೆ ಗೂಳಿಯ ಹಾಗೆ ಅವನ ಮೇಲೆ ಹಾಯುವನು ಅಥವಾ ಒದ್ದು ಕಚ್ಚಿಬಿಡುವನು. ಶಾಲೆ ಮುಗಿದಮೇಲೆ ನಾವು ಮನೆಗೆ ಹಿಂದಿರುಗುತ್ತಿದ್ದೆವು, ಆದರೆ ಬೋಧಿರಾಜ ಅಲೆಯಲು ಹೊರಡುತ್ತಿದ್ದನು.

ಯಾವಾಗಲೂ ಅವನು ವಿಚಿತ್ರ ಕಥೆಗಳ ಸರಕನ್ನಿಟ್ಟುಕೊಂಡಿರುವನು. ಒಂದು ದಿನ ಅವನು, "ನಮ್ಮ ಮನೆಯಲ್ಲಿ ಒಂದು 'ಘೋ' ಇದೆ. 'ಘೋ' ಎಂದರೇನು ನಿಮಗೆ ಗೊತ್ತೆ?" ಎಂದ.

"ಇಲ್ಲ, 'ಘೋ' ಎಂದರೇನು?"

"ಅದು ನೆಲದ ಮೇಲೆ ಹರಿದಾಡುವ ಒಂದು ಪ್ರಾಣಿ, ಒಂದು ಅಡಿ ಉದ್ದ ಇರತ್ತೆ. ಅದಕ್ಕೆ ತುಂಬಾ ಕಾಲುಗಳು, ಉಗುರು."

ನಾವು ನಡುಗಿದೆವು.

"ನಮ್ಮ ಮನೇಲಿ ಮಹಡಿಮೆಟ್ಟಿಲ ಕೆಳಗೆ ಒಂದು 'ಘೋ' ಇದೆ," ಅವನು ಮುಂದುವರೆಸಿದ. "ಒಂದು ಸಲ ಅದು ಏನನ್ನಾದರೂ ಹಿಡಿದುಬಿಟ್ಟರೆ ಸಾಕು, ಏನೇ ಆದರೂ ಸಡಿಲಮಾಡುವುದಿಲ್ಲ."

ನಾವು ಮತ್ತೆ ನಡುಗಿದೆವು.

"ಕಳ್ಳರ ಹತ್ತಿರ 'ಘೋ'ಗಳಿರುತ್ತವೆ. ಎತ್ತರವಾದ ಗೋಡೆಗಳನ್ನು ಹತ್ತುವುದಕ್ಕೆ ಅದನ್ನ ಉಪಯೋಗಿಸುತ್ತಾರೆ. 'ಘೋ'ದ ಹಿಂದಿನ ಕಾಲುಗಳಿಗೆ ಒಂದು ಹಗ್ಗ ಕಟ್ಟಿ ಅದನ್ನು ಮೇಲಕ್ಕೆ ಎಸೆಯುತ್ತಾರೆ. 'ಘೋ' ಗೋಡೆಯನ್ನು ಮುಟ್ಟುವುದೇ ತಡ, ಗಟ್ಟಿಯಾಗಿ ಹಿಡಿದುಕೊಂಡುಬಿಡುತ್ತೆ. ಹತ್ತು ಜನಕ್ಕೆ ಸಹ ಅದನ್ನ ಕಿತ್ತು ಹಾಕುವುದಕ್ಕೆ ಆಗುವುದಿಲ್ಲ. ಆಮೇಲೆ ಕಳ್ಳರು ಹಗ್ಗವನ್ನು ಹಿಡಿದುಕೊಂಡು ಗೋಡೆಯ ಮೇಲಕ್ಕೆ ಏರಿಬಿಡುತ್ತಾರೆ."

'ಘೋ' ಅದರ ಹಿಡಿತವನ್ನ ಸಡಲಿಸುವುದು ಯಾವಾಗ?"

"ಕಳ್ಳರು ಮೇಲಕ್ಕೆ ಹತ್ತಿದ ಮೇಲೆ ಅದಕ್ಕೆ ಒಂದಿಷ್ಟು ಹಾಲನ್ನು ಕೊಡುತ್ತಾರೆ. ತಕ್ಷಣ ಅದು ಹಿಡಿತವನ್ನು ಬಿಡುತ್ತದೆ."

ಅವನು ನಮಗೆ ಹೇಳುತ್ತಿದ್ದುದು ಇಂತಹ ಕಥೆಗಳನ್ನು.

ನಮ್ಮ ತಂದೆಗೆ ಕೆಲಸದಲ್ಲಿ ಬಡ್ತಿ ಸಿಕ್ಕಿತು, ನಾವು ದೊಡ್ಡಬಂಗಲೆಗೆ ಹೋದೆವು. ಅದು ಊರಿನ ಹೊರ ಅಂಚಿನಲ್ಲಿದ್ದ ಹಳೆಯ ಕಾಲದ ಬಂಗಲೆ. ಅದಕ್ಕೆ ಇಟ್ಟಿಗೆಯ ನೆಲ, ಎತ್ತರಾದ ಗೋಡೆಗಳು, ಇಳಿಜಾರು ಚಾವಣಿ ಮತ್ತು ಮರಗಳೂ ಪೊದೆಗಳೂ ತುಂಬಿದ ತೋಟ. ನೆಮ್ಮದಿಯಾದ ಬಂಗಲೆಯಾದರೂ ಸ್ವಲ್ಪಮಟ್ಟಿಗೆ ಬರಿದಾಗಿ, ಖಾಲಿಯಾಗಿ ಕಾಣುತ್ತಿತ್ತು; ಊರಿನಿಂದ ದೂರ ಇದ್ದುದರಿಂದ ನನ್ನ ಸ್ನೇಹಿತರು ನನ್ನನ್ನು ನೋಡಲು ಬರುತ್ತಿದ್ದುದು ಅಪರೂಪ.

ಇದಕ್ಕೆ ಹೊರತಾಗಿದ್ದವನು ಬೋಧಿರಾಜ. ಅವನಿಗೆ ಅಲ್ಲಿ ಒಳ್ಳೆಯ ಬೇಟೆ. ಮರಗಳಲ್ಲಿ ಬೇಕಾದಷ್ಟು ಗೂಡುಗಳಿದ್ದವು, ಕೋತಿಗಳು ಆಟವಾಡುತ್ತಿದ್ದವು, ಪೊದೆಗಳಲ್ಲಿ ಒಂದು ಜೊತೆ ಮುಂಗಸಿಗಳಿದ್ದವು. ಮನೆಯ ಹಿಂದೆ ಒಂದು ದೊಡ್ಡ ಕೊಠಡಿ, ಅಲ್ಲಿ ನಮ್ಮ ತಾಯಿ ಹೆಚ್ಚಾಗಿದ್ದ ಸಾಮಾನುಗಳನ್ನು ಇಟ್ಟಿದ್ದರು. ಈ ಕೊಠಡಿ ಪಾರಿವಾಳಗಳಿಗೆ ತವರಾಗಿ ಬಿಟ್ಟಿತ್ತು. ಇಡೀ ದಿನ ಅವುಗಳ ಮೆಲು ಶಬ್ದ ಕೇಳುತ್ತಿತ್ತು. ಗವಾಕ್ಷಿಯ ಮುರಿದ ಗಾಜಿನ ಹತ್ತಿರ ಒಂದು ಮೈನಾ ಹಕ್ಕಿಯ ಗೂಡು. ಗರಿಗಳು, ಪಕ್ಷಿಗಳು, ಒಡೆದ ಮೊಟ್ಟೆಗಳು, ಒಣ ಹುಲ್ಲಿನ ತುಂಡುಗಳು ಗೂಡುಗಳಿಂದ ಬಿದ್ದು ನೆಲ ತುಂಬಿಹೋಗಿರುತ್ತಿತ್ತು.

ಒಮ್ಮೆ ಬೋಧಿರಾಜ ಒಂದು ಮುಳ್ಳು ಹಂದಿಯನ್ನು ತಂದ. ಅದರ ಕಪ್ಪು ಮೂತಿ ಮತ್ತು ಚೂಪಾದ ಮುಳ್ಳುಗಳನ್ನು ನೋಡಿ ನನಗೆ ವಾಕರಿಕೆ ಬಂತು. ಬೋಧಿರಾಜನ ಜೊತೆಗೆ ನಾನು ಸ್ನೇಹವಾಗಿರುವುದು ನನ್ನ ತಾಯಿಗೆ ಒಪ್ಪಿಗೆಯಾಗಲಿಲ್ಲ, ಆದರೆ ನಾನು ಒಂಟಿಯಾಗಿದ್ದೇನೆ, ಜೊತೆಗೆ ಸ್ನೇಹಿತರು ಬೇಕು ಎಂದು ಅವರು ಅರ್ಥಮಾಡಿಕೊಂಡಿದ್ದರು. ನನ್ನ ತಾಯಿ ಅವನನ್ನು ದೆವ್ವ ಎಂದು ಕರೆಯುತ್ತಿದ್ದರು ಮತ್ತು ಪಕ್ಷಿಗಳನ್ನು ಗೋಳಾಡಿಸಬೇಡ ಎಂದು ಆಗಾಗ ಅವನಿಗೆ ಹೇಳುತ್ತಿದ್ದರು.

ಒಂದು ದಿನ ನನ್ನ ತಾಯಿ ನನಗೆ "ನಿನ್ನ ಸ್ನೇಹಿತನಿಗೆ ಗೂಡುಗಳನ್ನು ನಾಶಮಾಡುವುದು ಅಷ್ಟು ಇಷ್ಟವಾಗಿದ್ದರೆ ನಮ್ಮ ಉಗ್ರಾಣವನ್ನು ಸ್ವಚ್ಛಮಾಡು ಅಂತ ಹೇಳು. ಪಕ್ಷಿಗಳು ಅದನ್ನ ತುಂಬ ಕೊಳಕುಮಾಡಿವೆ" ಎಂದರು.

ನಾನು ಪ್ರತಿಭಟಿಸಿದೆ, "ಗೂಡುಗಳನ್ನು ನಾಶಮಾಡೋದು ಕ್ರೂರ ಕೆಲಸ ಅಂತ ನೀನೇ ಹೇಳಿದ್ದೆ."

"ಅವನು ಪಕ್ಷಿಗಳನ್ನು ಕೊಲ್ಲಬೇಕು ಅಂತ ನಾನು ಹೇಳಲಿಲ್ಲ. ಅವಕ್ಕೆ ತೊಂದರೆ ಮಾಡದೆ ಅವನು ಗೂಡುಗಳನ್ನು ತೆಗೆದುಬಿಡಬಹುದು."

ಆದಾದಮೇಲೆ ಬೋಧಿರಾಜ ಬಂದಾಗ ಅವನನ್ನು ನಮ್ಮ ಉಗ್ರಾಣಕ್ಕೆ ಕರೆದುಕೊಂಡುಹೋದೆ. ಯಾವುದೋ ಕಾಡುಪ್ರಾಣಿಯ ಗುಹೆಯನ್ನು ಹೊಕ್ಕಂತೆ ಅಲ್ಲಿ ಕತ್ತಲು, ವಾಸನೆ.

ನನಗೆ ಸ್ವಲ್ಪ ಆತಂಕವಾಗಿತ್ತು ಎಂದು ಒಪ್ಪಿಕೊಳ್ಳಬೇಕು. ತನ್ನ ಸ್ವಭಾವಕ್ಕೆ ಅನುಗುಣವಾಗಿ ಬೋಧಿರಾಜ ಗೂಡುಗಳನ್ನು ನಾಶಮಾಡಿ, ಪಕ್ಷಿಗಳ ಗರಿಗಳನ್ನೆಲ್ಲ ಕಿತ್ತು ಹಾಕಿ ಅವುಗಳ ಮೊಟ್ಟೆಗಳನ್ನು ಒಡೆದುಹಾಕಿದರೆ ಹೇಗೆ? ನಮ್ಮ ಗೆಳೆತನಕ್ಕೆ ಪ್ರೋತ್ಸಾಹ ಕೊಡದಿದ್ದ ನನ್ನ ತಾಯಿ ಬೋಧಿರಾಜನನ್ನು ಉಗ್ರಾಣವನ್ನು ಸ್ವಚ್ಛ ಮಾಡಲು ಕರೆದುಕೊಂಡು ಹೋಗುವಂತೆ ಏಕೆ ಹೇಳಿದರು ಎಂದು ನನಗೆ ಅರ್ಥವಾಗಲಿಲ್ಲ.

ಬೋಧಿರಾಜ ತನ್ನ ಕವಣೆಯನ್ನು ತಂದಿದ್ದ. ಎಚ್ಚರದಿಂದ ಚಾವಣಿಯ ಕೆಳಗೆ ಗೂಡುಗಳ ಸ್ಥಾನವನ್ನು ಗಮನಿಸಿದ. ಚಾವಣಿಯ ಎರಡು ಪಾರ್ಶ್ವಗಳೂ ಇಳಿಜಾರಾಗಿದ್ದವು, ಮಧ್ಯೆ ಅದಕ್ಕೆ ಒತ್ತಾಸೆಯಾಗಿ ಒಂದು ತೊಲೆ. ತೊಲೆಯ ಒಂದು ಕೊನೆಯಲ್ಲಿ ಗವಾಕ್ಷಿಯ ಕೆಳಗೆ ಒಂದು ಮೈನಾ ಗೂಡು. ಎಕ್ಕದ ಹತ್ತಿ ಮತ್ತು ಚಿಂದಿಬಟ್ಟೆಗಳ ಚೂರುಗಳು ಹೊರಕ್ಕೆ ಇಳಿ ಬಿದ್ದಿದ್ದವು ನನಗೆ ಕಾಣಿಸಿತು. ಕೆಲವು ಪಾರಿವಾಳಗಳು ತೊಲೆಯ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಮೃದುವಾಗಿ ಕೂಗುತ್ತ ವೈಯಾರದಿಂದ ಓಡಾಡುತ್ತಿದ್ದವು.

ಕವಣೆಯನ್ನು ಗುರಿ ಇಡುತ್ತ ಬೋಧಿರಾಜ, "ಮೈನಾ ಮರಿಗಳು ಮೇಲೆ ಅಲ್ಲಿವೆ," ಎಂದ.

ಗೂಡಿನಿಂದ ಹೊರಕ್ಕೆ ಎರಡು ಬಹುವುಟ್ಟ ಹಳದಿ ಕೊಕ್ಕುಗಳು ಹೊರಕ್ಕೆ ಚಾಚಿದ್ದುದು ನನಗೆ ಕಾಣಿಸಿತು.

"ನೋಡು!" ಬೋಧಿರಾಜ ಉದ್ಗಾರ ತೆಗೆದ, "ಇದೊಂದು ಗಂಗಾ ಮೈನ. ಈ ಪ್ರದೇಶದಲ್ಲಿ ಸಾಮಾನ್ಯವಾಗಿ ಇದು ಕಾಣೋದಿಲ್ಲ. ತಂದೆ ತಾಯಿ ತಮ್ಮ ಗುಂಪಿನಿಂದ ಬೇರೆಯಾಗಿ ಹೋಗಿ ಇಲ್ಲಿಗೆ ಬಂದಿರಬೇಕು."

"ತಂದೆ ತಾಯಿ ಎಲ್ಲಿ?" ನಾನು ಕೇಳಿದೆ.

"ಆಹಾರ ಹುಡುಕಿಕೊಂಡು ಹೋಗಿರಬೇಕು. ಸ್ವಲ್ಪ ಹೊತ್ತಿನಲ್ಲೆ ಅವು ಹಿಂದಕ್ಕೆ ಬರಬೇಕು." ಬೋಧಿರಾಜ ಕವಣೆಯನ್ನು ಮೇಲೆತ್ತಿದ.

ನನಗೆ ಅವನನ್ನು ತಡೆಯಬೇಕೆನ್ನಿಸಿತು. ಆದರೆ ನಾನು ಬಾಯಿ ತೆರೆಯುವಷ್ಟರಲ್ಲಿ ಜುಂಯ್ ಎಂದು ಶಬ್ದವಾಯಿತು, ಚಾವಣಿಯ ಮೇಲಿದ್ದ ಉಬ್ಬುತಗ್ಗುಗಳ ಕಬ್ಬಿಣದ ಹಾಳೆಗೆ ಕಲ್ಲು ಹೊಡೆದಾಗ 'ಟಂಗ್' ಎಂದು ಶಬ್ದ ಕೇಳಿಸಿತು.

ಪುಟ್ಟ ಕೊಕ್ಕುಗಳು ಕಣ್ಮರೆಯಾದವು. ಮೃದು ಶಬ್ದ, ಚಿರಿಚು ಶಬ್ದ ಎಲ್ಲ ನಿಂತುಹೋದವು. ಪಕ್ಷಿಗಳೆಲ್ಲ ಹೆದರಿ ಮೌನವಾಗಿಬಿಟ್ಟಂತೆ ಕಂಡಿತು.

ಬೋಧಿರಾಜ ಮತ್ತೊಂದು ಕಲ್ಲನ್ನು ಹೊಡೆದ. ಈ ಬಾರಿ ಅದು ತೊಲೆಗೆ ಹೊಡೆಯಿತು. ಬೋಧಿರಾಜನಿಗೆ ತನ್ನ ಗುರಿಯ ಬಗೆಗೆ ಬಹು ಹೆಮ್ಮೆ; ಆದರೆ ಎರಡು ಬಾರಿ ಗುರಿತಪ್ಪಿತ್ತು, ಅವನಿಗೆ ತನ್ನ ಮೇಲೇ ಬಹಳ ಸಿಟ್ಟು ಬಂದಿತ್ತು. ಮರಿಗಳು ಗೂಡಿನ ಅಂಚಿನಾಚೆ ಇಣುಕಿ ನೋಡಿದಾಗ ಒಂದು ಪಾರ್ಶ್ವಕ್ಕೆ ಬಡಿಯಿತು, ಒಂದಿಷ್ಟು ಒಣ ಹುಲ್ಲು ಹತ್ತಿಯ ತುಂಡುಗಳೂ ಕೆಳಕ್ಕೆ ಬಿದ್ದವು - ಆದರೆ ಗೂಡು ಬೀಳಲಿಲ್ಲ.

ಬೋಧಿರಾಜ ಮತ್ತೆ ಕವಣೆಯನ್ನು ಎತ್ತಿದ. ಇದ್ದಕ್ಕಿದ್ದಂತೆ, ಗವಾಕ್ಷಿಯಿಂದ ಬರುತ್ತಿದ್ದ ಬೆಳಕನ್ನು ಅಡ್ಡಗಟ್ಟುತ್ತ ದೊಡ್ಡದೊಂದು ನೆರಳು ಕೊಠಡಿಯ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ವಾಲಿತು. ಬೆಚ್ಚಿ ಬಿದ್ದು ನಾವು ಮೇಲೆ ನೋಡಿದೆವು. ರೆಕ್ಕೆಗಳನ್ನು ಹರಡಿಕೊಂಡ ದೊಡ್ಡ ಗಿಡುಗ ಒಂದು ಭಯವನ್ನುಂಟು ಮಾಡುವಂತೆ ನಮ್ಮ ಕಡೆಯೇ ದುರುಗುಟ್ಟುತ್ತಿತ್ತು.

"ಇದು ಗಿಡುಗದ ಗೂಡಿರಬೇಕು," ನಾನು ಹೇಳಿದೆ.

"ಇಲ್ಲ, ಗಿಡುಗದ ಗೂಡು ಇಲ್ಲಿರಲು ಹೇಗೆ ಸಾಧ್ಯ? ಯಾವಾಗಲೂ ಗಿಡುಗ ಮರದಮೇಲೆ ಗೂಡನ್ನು ಕಟ್ಟುತ್ತದೆ. ಇದು ಮೈನಾ ಹಕ್ಕಿಯ ಗೂಡು."

ಮರಿಗಳು ರೆಕ್ಕೆಗಳನ್ನು ಪಟಪಟ ಬಡಿಯುತ್ತ ಗಟ್ಟಿಯಾಗಿ ಅರಚಲು ಪ್ರಾರಂಭಿಸಿದವು. ನಾವು ಉಸಿರನ್ನು ಬಿಗಿಹಿಡಿದುಕೊಂಡೆವು. ಗಿಡಗ ಈಗ ಏನು ಮಾಡುವುದು?

ಗಿಡಗವು ಗವಾಕ್ಷಿಯನ್ನು ಬಿಟ್ಟು ಚೌಕಟ್ಟಿನ ಮೇಲೆ ಕುಳಿತಿತು. ಅದು ರೆಕ್ಕೆಗಳನ್ನು ಮುದುಡಿಕೊಂಡಿತ್ತು. ಅದರ ಬಡಕಲು ಕುತ್ತಿಗೆಯನ್ನು ಅಲ್ಲಾಡಿಸಿತು. ಅನಂತರ ಬಲಕ್ಕೆ ಮತ್ತೆ ಎಡಕ್ಕೆ ಗಮನವಿಟ್ಟು ಇಣಿಕಿನೋಡಿತು.

ಪಕ್ಷಿಗಳ ಹೆದರಿದ ಕಿರಿಚಾಟದಿಂದ ಗಾಳಿ ತುಂಬಿಹೋಯಿತು.

"ಗಿಡಗ ಪ್ರತಿನಿತ್ಯವೂ ಇಲ್ಲಿಗೆ ಬರುತ್ತಿದೆ," ಬೋಧಿರಾಜ ಹೇಳಿದ.

ಮುರಿದ ರೆಕ್ಕೆಗಳು, ಹುಲ್ಲು ಮತ್ತು ಪಕ್ಷಿಯ ಮಾಂಸದ ತುಣುಕುಗಳು ನೆಲದ ಮೇಲೆಲ್ಲ ಬಿದ್ದಿರುವುದೇಕೆ ಎಂದು ನನಗೆ ಅರ್ಥವಾಯಿತು. ಮತ್ತೆ ಮತ್ತೆ ಗಿಡಗ ಗೂಡನ್ನು ಲೂಟಿ ಹೊಡೆದಿರಬೇಕು.

ಗಿಡಗ ನಿಧಾನವಾಗಿ ಗೂಡಿನತ್ತ ಸಾಗುತ್ತಿತ್ತು, ಬೋಧಿರಾಜ ಅದರಿಂದ ತನ್ನ ಕಣ್ಣನ್ನು ಅತ್ತಿತ್ತ ಅಲುಗಿಸಿರಲಿಲ್ಲ, ಕಿರಿಚಾಟ ತಾರಕಕ್ಕೇರುತ್ತಿತ್ತು.

ನಾನು ಗಾಬರಿಯ ಮುದ್ದೆಯಾಗಿಬಿಟ್ಟಿದ್ದೆ. ಮೈನಾದ ಮರಿಗಳನ್ನು ಗಿಡಗ ಕೊಂದರೇನು, ಬೋಧಿರಾಜ ಕೊಂದರೇನು? ಗಿಡಗ ಬಾರದೆ ಹೋಗಿದ್ದರೆ ಕ್ಷಣದಲ್ಲಿ ಬೋಧಿರಾಜ ಗೂಡನ್ನು ನಾಶಮಾಡಿರುತ್ತಿದ್ದ.

ಬೋಧಿರಾಜ ಕವಣೆಯನ್ನೆತ್ತಿ ಗಿಡಗದ ಕಡೆ ಗುರಿ ಇಟ್ಟ.

"ಗಿಡಗವನ್ನ ಹೊಡೀಬೇಡ. ಅದು ನಿನ್ನ ಮೇಲೆ ಬೀಳತ್ತೆ," ನಾನು ಕೂಗಿದೆ. ಆದರೆ ಬೋಧಿರಾಜ ಗಮನವನ್ನೆ ಕೊಡಲಿಲ್ಲ, ಕಲ್ಲು ಗಿಡಗಕ್ಕೆ ಬೀಳದೆ ಚಾವಣಿಗೆ ಹೊಡೆಯಿತು. ಗಿಡಗ ರೆಕ್ಕೆಗಳನ್ನು ಹರಡಿ ಕೆಳಕ್ಕೆ ಇಣಕಿ ನೋಡಿತು.

"ಇಲ್ಲಿಂದ ನಾವು ಹೊರಟು ಹೋಗೋಣ," ಗಾಬರಿಯಾಗಿ ನಾನು ಹೇಳಿದೆ.

"ಗಿಡಗ ಪುಟ್ಟ ಮರಿಗಳನ್ನು ತಿಂದು ಬಿಡತ್ತೆ" ಅವನ ಬಾಯಿಂದ ಬಂದ ಈ ಮಾತುಗಳು ವಿಚಿತ್ರ ಎನ್ನಿಸಿದವು.

ಬೋಧಿರಾಜ ಮತ್ತೆ ಗುರಿ ಇಟ್ಟ. ಗಿಡಗ ಚಾವಣಿಯನ್ನು ಬಿಟ್ಟು ತನ್ನ ರೆಕ್ಕೆಗಳನ್ನು ಹರಡಿ ಅರ್ಧ ವೃತ್ತಾಕಾರವಾಗಿ ಹಾರಿ ತೊಲೆಯ ಮೇಲೆ ಕುಳಿತಿತು. ಮರಿಗಳು ಅರಚಿಕೊಳ್ಳುತ್ತಲೇ ಇದ್ದವು.

ಬೋಧಿರಾಜ ಕವಣೆಯನ್ನೂ ತನ್ನ ಜೇಬಿನಿಂದ ಕೆಲವು ಕಲ್ಲುಗಳನ್ನೂ ನನ್ನ ಕೈಗೆ ಕೊಟ್ಟ.

"ಗಿಡಗಕ್ಕೆ ಗುರಿ ಇಡು. ಹೊಡೀತಾಲೇ ಇರು. ಅದು ಕುಳಿತುಕೊಳ್ಳೋದಕ್ಕೆ ಬಿಡಲೇ ಬೇಡ." ಅವನು ಹೇಳಿಕೊಟ್ಟ, ಅನಂತರ ಓಡಿಹೋಗಿ, ಗೋಡೆಯ ಹತ್ತಿರ ಇದ್ದ ಒಂದು ಮೇಜನ್ನು ಕೊಠಡಿಯ ಮಧ್ಯಕ್ಕೆ ಎಳೆದು ಇಟ್ಟ.

ಕವಣೆಯನ್ನ ಹೇಗೆ ಉಪಯೋಗಿಸಬೇಕು ಅನ್ನೋದೇ ನನಗೆ ಗೊತ್ತಿರಲಿಲ್ಲ. ಒಂದು ಸಲ ಪ್ರಯತ್ನಿಸಿದೆ. ಆದರೆ ಗಿಡಗ ಒಂದು ತೊಲೆಯನ್ನು ಬಿಟ್ಟು ಮತ್ತೊಂದು ತೊಲೆಗೆ ಹಾರಿಹೋಗಿತ್ತು.

ಬೋಧಿರಾಜ ಮೇಜನ್ನು ಸರಿಯಾಗಿ ಮೈನಾದ ಗೂಡಿನ ಕೆಳಗಿಟ್ಟ, ಅನಂತರ ಮುರಿದುಹೋಗಿದ್ದ ಒಂದು ಕುರ್ಚಿಯನ್ನು ತಂದು ಮೇಜಿನ ಮೇಲಿಟ್ಟ, ಕುರ್ಚಿಯ ಮೇಲೆ ಹತ್ತಿದ, ಮೃದುವಾಗಿ ಗೂಡನ್ನು ಎತ್ತಿ ನಿಧಾನವಾಗಿ ಕೆಳಕ್ಕಿಳಿಸಿದ.

"ಇಲ್ಲಿಂದ ಹೊರಟು ಹೋಗೋಣ", ಎಂದು ಹೇಳಿ ಬಾಗಿಲಿನತ್ತ ಓಡಿದ. ನಾನು ಹಿಂದೆಯೇ ಹೋದೆ.

ನಾವು ಕಾರಿನ ಷೆಡ್‌ನ ಒಳಕ್ಕೆ ಹೋದೆವು. ಅದಕ್ಕಿದ್ದುದು ಒಂದೇ ಬಾಗಿಲು, ಹಿಂದಿನ ಗೋಡೆಯಲ್ಲಿ ಒಂದು ಸಣ್ಣ ಕಿಟಕಿ. ಆದರ ಅಗಲಕ್ಕೆ ಒಂದು ತೊಲೆ ಚಾಚಿಕೊಂಡಿತ್ತು.

"ಗಿಡಗಳ್ಕೆ ಇದರ ಒಳಕ್ಕೆ ಬರಲು ಸಾಧ್ಯವಾಗುವುದಿಲ್ಲ," ಅವನು ಹೇಳಿದ; ಒಂದು ಪೆಟ್ಟಿಗೆಯ ಮೇಲೆ ಹತ್ತಿ ಗೂಡನ್ನು ತೊಲೆಯ ಮೇಲೆ ಇಟ್ಟ.

ಮೈನಾ ಮರಿಗಳು ಸುಮ್ಮನಾಗಿದ್ದವು. ಪೆಟ್ಟಿಗೆಯ ಮೇಲೆ ನಿಂತು ಬೋಧಿರಾಜ ಮೊದಲ ಬಾರಿಗೆ ಗೂಡಿನೊಳಕ್ಕೆ ನೋಡಿದ. ಎಂದಿನಂತೆ ಅವೆರಡನ್ನೂ ಎತ್ತಿಕೊಂಡು ತನ್ನ ಜೇಬಿನಲ್ಲಿ ಇಟ್ಟುಕೊಳ್ಳುತ್ತಾನೆ ಎಂದು ನಾನು ಯೋಚಿಸಿದೆ. ಆದರೆ ಬಹಳ ಹೊತ್ತು ಅವುಗಳನ್ನೇ ನೋಡಿ ಅವನು, "ಒಂದಿಷ್ಟು ನೀರು ತೆಗೆದುಕೊಂಡು ಬಾ, ಮರಿಗಳಿಗೆ ನೀರಡಿಕೆಯಾಗಿದೆ. ನೀರನ್ನ ತೊಟ್ಟುತೊಟ್ಟಾಗಿ ಅವುಗಳ ಬಾಯಿಯಲ್ಲಿ ಬಿಡೋಣ" ಎಂದ.

ನಾನು ಒಂದು ಲೋಟ ನೀರು ತಂದೆ. ಎರಡು ಮರಿಗಳೂ ಕೊಕ್ಕನ್ನು ತೆರೆದುಕೊಂಡು ಏದುಸಿರು ಬಿಡುತ್ತಿದ್ದವು. ಬೋಧಿರಾಜ ಅವಕ್ಕೆ ಹನಿಹನಿಯಾಗಿ ನೀರು ಕುಡಿಸಿದ. ಅವನ್ನು ಮುಟ್ಟಬೇಡ ಎಂದು ನನಗೆ ಹೇಳಿದ, ತಾನೂ ಅವನ್ನು ಮುಟ್ಟಲಿಲ್ಲ.

"ಅವುಗಳ ತಂದೆತಾಯಿಗೆ ಅವು ಇಲ್ಲಿವೆ ಅಂತ ಹೇಗೆ ತಿಳಿಯುತ್ತದೆ?" ನಾನು ಕೇಳಿದೆ.

"ಅವು ಮರಿಗಳಿಗಾಗಿ ಹುಡುಕುತ್ತವೆ."

ನಾವು ಷೆಡ್ಡಿನಲ್ಲಿ ಬಹಳ ಹೊತ್ತು ಇದ್ದೆವು. ಬೋಧಿರಾಜ ಗಿಡಗವು ಮತ್ತೆ ಉಗ್ರಾಣಕ್ಕೆ ಬರದಂತೆ ಗವಾಕ್ಷಿಯನ್ನು ಮುಚ್ಚಿಬಿಡುವ ಯೋಚನೆಯನ್ನು ಚರ್ಚಿಸಿದ. ಅವತ್ತು ಸಂಜೆಯಲ್ಲಿ ಅವನು ಬೇರೆ ಯಾವ ಮಾತನ್ನೂ ಆಡಲಿಲ್ಲ.

ಮರುದಿನ ಬೋಧಿರಾಜ ಬಂದಾಗ ಅವನ ಹತ್ತಿರ ಕವಣೆಯೂ ಇರಲಿಲ್ಲ, ಕಲ್ಲುಗಳೂ ಇರಲಿಲ್ಲ. ಅವನು ಬೀಜಗಳ ಒಂದು ಚೀಲವನ್ನು ತಂದಿದ್ದ. ನಾವು ಮೈನಾ ಮರಿಗಳಿಗೆ ಆಹಾರಕೊಟ್ಟೆವು, ಗಂಟೆಗಟ್ಟಲೆ ಅವುಗಳ ಆಟವನ್ನು ನೋಡುತ್ತ ಕಳೆದವು.

# ರಾಹುಲ

ತ್ರಿವೇಣಿ

ರಾಹುಲ ನಮ್ಮಲ್ಲಿಗೆ ಬಂದಾಗ ಹಾಲುಕಂದ. ಮಡಿ, ಆಚಾರವನ್ನು ಚಾಚೂ ತಪ್ಪದೆ ಆಚರಿಸುತ್ತಿದ್ದ ನಮ್ಮ ಅಜ್ಜಿ "ರಾಹುಲ" ಮನೆಗೆ ಬರುವ ಸುದ್ದಿ ಕೇಳಿ ಗಾಬರಿಯಾದರು. ನಮ್ಮ ತಂದೆ ಆರಾಮವಾಗಿ ಕುಳಿತು ಪೇಪರು ಓದುತ್ತಿದ್ದಾಗ ಅಜ್ಜಿ ಅವರ ಬಳಿ ಕುಳಿತು 'ಮಗೂ' ಎಂದರು. ಅಜ್ಜಿ ರಾಹುಲನ ಆಗಮನದ ವಿಚಾರವಾಗಿ ದೊಡ್ಡ ಉಪನ್ಯಾಸವನ್ನೇ ಕೊಡುವಳೆಂಬುದು ತಂದೆಗೆ ತಿಳಿದಿತ್ತು. ಆದುದರಿಂದ ಅಪ್ಪ ಉಪದೇಶಕ್ಕೆ ಸಿದ್ಧರಾಗಿ ಪೇಪರು ಮಡಿಚಿಟ್ಟರು. ನಾನು ಸೀಬೆಕಾಯಿ ತಿನ್ನುತ್ತ ಅಲ್ಲಿಯೇ ನಿಂತಿದ್ದೆ.

"ಅಲ್ಲ ಕಣೋ, ಮಡಿ, ಹುಡಿ ಆಚಾರ ಇಟ್ಟುಕೊಂಡಿರುವ ಬ್ರಾಹ್ಮಣರು ನಾಯಿ ಸಾಕಬಹುದೇ? ಹಾಳಾದ್ದು ಇನ್ನು ಮಡಿ ಮೈಲಿಗೆ ಎಲ್ಲಾ ಬೆರೆಸಿ ಬಿಡುತ್ತದೆ."

"ನಾಯಿ ತುಂಬಾ ಬುದ್ಧಿಯುಳ್ಳ ಪ್ರಾಣಿ ಕಣಮ್ಮ ನಾವು ಅದಕ್ಕೆ ಶಿಸ್ತು, ನಿಯಮ ಕಲಿಸಿದರೆ ಬೇಗ ಕಲಿತುಕೊಂಡು ಬಿಡುತ್ತದೆ. ನಾವು ಹೇಗೆ ಕಲಿಸಿದರೆ ಹಾಗೆ"

"ಲಕ್ಷಣವಾಯ್ತು. ಶ್ವಾನ ಮುಂಡೇದರ ಬುದ್ಧಿ ಯಾವ ಗಳಿಗೆಗೆ ಹೇಗೆ ತಿರುಗುತ್ತದೋ ಯಾರಿಗೆ ಗೊತ್ತು? ಅಡಿಗೆ ಮನೆಯಲ್ಲಿ ತಿಂಡಿ, ಅನ್ನದ ವಾಸನೆ ಹಿಡಿದು ಹಸಿವಿನಿಂದ ಒಳಗೆ ನುಗ್ಗಿ ಬಂದರೋ? ಇನ್ನು ಅದಕ್ಕೆ ಬೇರೆ ಪುಣ್ಯಾವರ್ಚನೆ, ದಕ್ಷಿಣೆ..."

"ಅದೇ ಹೇಳಿದೆನಲ್ಲಮ್ಮ ಅಡಿಗೆ ಮನೆಯೊಳಗೆ ಬಾರದ ಹಾಗೆ ನಾವು ನೋಡಿಕೊಂಡರಾಯಿತು. ನಾಲ್ಕೇಟು ಹಾಕಿದರೆ ಅದು ತಿಳಿದುಕೊಂಡು ಆ ಮೇಲೆ ಯಾವಾಗಲೂ ಅಲ್ಲಿಗೆ ಕಾಲಿಡುವುದಿಲ್ಲ"

"ಅದಂತೂ ಸರಿ. ನಾನು ಊಟಮಾಡಿ ಎಂಜಿಲೆಲೆ ಬಿಸಾಡಲು ಹೋದಾಗ ಹಾರಿಬಂದು ಮೇಲೆ ಬಿದ್ದರೋ? ಇನ್ನು ಆ ಪಾಪ ಕಳೆದುಕೊಳ್ಳುವುದಕ್ಕೆ ಗಂಗಾ ನದೀಲೆ ಸ್ನಾನ ಮಾಡಬೇಕಾಗುತ್ತದೆ."

"ಮರಿಯಾಗಿದ್ದಾಗಿನಿಂದಲೂ ನಾವು ಸಾಕಿ, ಅದಕ್ಕೆ ಸರಿಯಾದ ತಿಳುವಳಿಕೆ ಕೊಟ್ಟರೆ ಅದು ಚೆನ್ನಾಗಿ ತಿಳಿದುಕೊಳ್ಳುತ್ತಮ್ಮ ನಿನ್ನ ಮಡಿಗೆ ಅದು ತೊಂದರೆ ತರದಹಾಗೆ ನಾನು ನೋಡಿಕೊಳ್ಳುತ್ತೇನೆ."

ಅಜ್ಜಿ ತುಂಬಾ ಅಸಮಾಧಾನದಿಂದ "ಅಂತೂ ನೀನು ತರಲೇಬೇಕು ಅಂತ ನಿರ್ಧರಿಸಿರುವ ಹಾಗಿದೆ. ನಾನೇಕೆ ಮಾತನಾಡಿ ಕೆಟ್ಟವಳಾಗಲಿ."

"ಅಮ್ಮ ನಿನಗೆ ನೋವನ್ನುಂಟುಮಾಡಬೇಕೆಂಬುದು ನನ್ನ ಉದ್ದೇಶವಲ್ಲ ಈಗ ಎಲ್ಲೆಲ್ಲೂ ಕಳ್ಳರ ಕಾಟ ಜಾಸ್ತಿಯಾಗಿದೆ. ಒಂದು ನಾಯಿ ಸಾಕಿದರೆ ಹತ್ತು ಜನ ಕಾವಲಿದ್ದಂತೆ, ಉಪ್ಪು ತಿಂದ ಮನೆಗೆ ಅದು ಎರಡು ಬಗೆಯುವುದಿಲ್ಲ"

"ಸರಿ, ನಿನ್ನಿಷ್ಟ" ಎಂದು ಅಜ್ಜಿ ಕೋಪದಿಂದ ನುಡಿದು ಒಳಗೆ ಹೊರಟುಹೋದರು. ಅಜ್ಜಿಯ ಕೋಪ ನೋಡಿ ಅಪ್ಪ ನಗುತ್ತಾ ನನ್ನ ಕಡೆ ತಿರುಗಿ "ನೀನೇನು ಹೇಳ್ತೀಯಾ ಲೀಲೂ?" ಎಂದರು.

"ಮನೆಯಲ್ಲಿ ನಾಯಿ ಇದ್ದರೆ ಒಳ್ಳೆಯದಣ್ಣ ನನಗೂ ಬಹಳ ದಿನಗಳಿಂದ ನಾಯಿ ಸಾಕಬೇಕೆಂದು ಆಸೆಯಿತ್ತು" ಎಂದೆ ನಾನು.

ಒಂದು ದಿನ ಚೆನ್ನ ಜಾತಿನಾಯಿ ಮರಿಯೊಂದನ್ನು ಖರೀದಿ ಮಾಡಿ ತೆಗೆದುಕೊಂಡು ಬಂದ.

ಮರಿಯನ್ನು ಎದೆಗೆ ಅವುಚಿಕೊಂಡು "ಲೀಲವ್ವಾ" ಎಂದು ಕೂಗಿದ. ನಾನು ಹೊರಗೆ ಬಂದೆ.

"ಮರಿ ತಂದಿದೀನಿ ನೋಡಿ. ಪಸಂದಾಗಿದೆಯೇ?" ನಾನು ಮರಿಯ ಕಡೆ ನೋಡಿದೆ. ಮರಿ ಹೆದರಿಕೆಯಿಂದ ದೇಹವನ್ನೆಲ್ಲಾ ಮುದುರಿ ಮುದ್ದೆ ಮಾಡಿಕೊಂಡಿತ್ತು. ಮರಿಯ ಬಣ್ಣ ಅಚ್ಚ ಕಪ್ಪು ಕತ್ತಲಿನಲ್ಲಿ ಅದರ ಇರುವಿಕೆಯೇ ತಿಳಿಯದಷ್ಟು ಕಾಳಕಪ್ಪು ಮೈಯೆಲ್ಲಾ ಹುಡುಕಿದರೂ ಒಂದು ಬಿಳಿಯ ಕೂದಲು ಸಿಕ್ಕುತ್ತಿರಲಿಲ್ಲ. ನಯವಾದ, ದಟ್ಟವಾದ ಕಪ್ಪು ಕೂದಲಿನಿಂದ ಅದರ ದೇಹವೆಲ್ಲಾ ಮುಚ್ಚಿಹೋಗಿತ್ತು. ಶರೀರಕ್ಕೆ ಬಹುದೊಡ್ಡದೆನಿಸುವ ಉದ್ದವಾದ, ಕಿರಿದಾದ ಕಿವಿಗಳು ಮರಿಯ ಮುಖದ ಎರಡೂ ಕಡೆಯಲ್ಲೂ ಇಳಿಬಿದ್ದು ಜೋತಾಡುತ್ತಿದ್ದವು. ಹೊಳಪಾದ ಹಸಿರು ಕಣ್ಣುಗಳೆರಡು ಭೀತಿಯಿಂದ ದೈನ್ಯದಿಂದ ನನ್ನ ಕಡೆ ನೋಡಿದವು. ಆ ಕಣ್ಣುಗಳಲ್ಲಡಗಿದ್ದ ದೈನ್ಯಕ್ಕೆ ನನ್ನ ಹೃದಯ ಕರಗಿತ್ತು. ಮುದ್ದಾದ ಮಗುವನ್ನು ನೋಡಿ ಹೃದಯದಲ್ಲಿ ಅಕ್ಕರೆ ಮೂಡುವಂತೆ ಮರಿಯನ್ನು ನೋಡಿ ನನಗೆ ಪ್ರೀತಿಯುಂಟಾಯಿತು.

"ಚೆನ್ನಾ, ಮರಿ ತುಂಬಾ ಚೆನ್ನಾಗಿದೆ ಕಣೋ. ಅದರ ಕಣ್ಣು ನೋಡು ಮಿಂಚುಹುಳು ಇದ್ದ ಹಾಗಿದೆ. ನಾನು ಎತ್ತಿಕೊಳ್ಳುತ್ತೀನಿ. ಬಾಮ್ಮ" ಎಂದು ಕೈ ನೀಡಿದೆ. "ಬಾಮ್ಮ ಅಲ್ಲ ಕಣವ್ವ. ಬಾರೋ ಅನ್ನಿ"

"ಎಷ್ಟು ದಿನವಾಗಿದೆ ಮರೀಗೆ?"

"ಇನ್ನೂ ಇಪ್ಪತ್ತು ದಿನದ ಮರಿ ಕಣವ್ವ. ತಾಯಿ ತಾವಿಂದ ಎತ್ಕೊಂಡು ಬರುವಾಗ ಬಡ್ಕೊಂಡು ಬಿಡ್ತು. ಬರೀ ಹಾಲಿನಲ್ಲೇ ಇನ್ನೂ ಒಂದು ತಿಂಗಳು ಸಾಕಬೇಕು. ಬಣ್ಣ ಹೇಗಿದೆಯವ್ವಾ" ಎನ್ನುತ್ತಾ ಚೆನ್ನ ಅಭಿಮಾನದಿಂದ ಮರಿಯ ಕಡೆ ನೋಡಿದ.

"ಅಮಾವಾಸ್ಯೆಯಯ ಕತ್ತಲೆಲ್ಲಾ ಈ ಮರಿಯ ದೇಹದಲ್ಲಿ ತುಂಬಿಕೊಂಡಿರುವ ಹಾಗಿದೆ" ಎನ್ನುತ್ತಾ ನಾನು ಮರಿಯನ್ನೆತ್ತಿಕೊಂಡು "ಅಮ್ಮಾ" ಎಂದು ಕೂಗಿದೆ.

"ಏನೇ ಅಷ್ಟೊಂದು ಗಲಾಟೆ ಮಾಡ್ತಿದೀಯಾ" ಎನ್ನುತ್ತಾ ಅಮ್ಮ ಅಜ್ಜಿ ಇಬ್ಬರೂ ಅಡಿಗೆ ಮನೆಯಿಂದೀಚೆಗೆ ಬಂದರು. ನನ್ನ ತೋಳಿನಲ್ಲಿದ್ದ ಮರಿಯನ್ನು ಕಂಡೊಡನೆ ಅಜ್ಜಿ ಸಿಡಿದು ದೂರನಿಂತು ಗದರಿಸಿದರು.

"ಏನು ನಾಚಿಕೆಗೇಡಮ್ಮ! ನಾಯಿಾನ ಮಗು ಎತ್ತಿಕೊಳ್ಳುವ ಹಾಗೆ ಎತ್ತಿಕೊಂಡಿದ್ದಾಳೆ. ಮದುವೆಯ ವಯಸ್ಸಾದರೂ ಬುದ್ಧಿ ಮಾತ್ರ ಬರಲಿಲ್ಲ"

ನಾನು ಅಜ್ಜಿಯನ್ನು ರೇಗಿಸಲೆಂದೇ ಮರಿಯನ್ನು ಮುದ್ದಿಸಿದೆ.

"ಅಯ್ಯೋ ದೇವರೇ, ಈ ಪಾಪಿ ಕಣ್ಣಿನಿಂದ ನಾನು ಇನ್ನೂ ಏನೇನು ನೋಡಬೇಕಾಗಿದೆಯೋ" ಎಂದುಕೊಳ್ಳುತ್ತಾ ಅಜ್ಜಿ ಒಳಗೆ ಹೊರಟು ಹೋದರು.

ಅಮ್ಮ ಮೆಚ್ಚುಗೆಯಿಂದ ಮರಿಯ ಕಡೆ ನೋಡಿ "ತುಂಬಾ ಚೆನ್ನಾಗಿದೆ, ಏನು ಹೆಸರಿಡೋಣ" ಎಂದರು. ಚೆನ್ನ ನನ್ನನ್ನು ಕೂಗಿದಾಗ ನಾನು "ಯಶೋಧರಾ" ನಾಟಕವನ್ನು ಓದುತ್ತಿದ್ದೆ. ರಾಹುಲ, ಯಶೋಧರೆಯರ ಚಿತ್ರಗಳಿನ್ನೂ ಮನಸ್ಸಿನಿಂದ ಪೂರ್ಣವಾಗಿ ಮರೆಯಾಗಿರಲಿಲ್ಲ. ಅಮ್ಮ ಏನು ಹೆಸರಿಡೋಣವೆಂದು ಕೇಳಿದಾಗ ನನ್ನ ಮನಸ್ಸಿಗೆ ಕೂಡಲೇ ಹೊಳೆದ ಹೆಸರು "ರಾಹುಲ".

"ಅಮ್ಮ ಮರೀನ 'ರಾಹುಲ' ಎಂದು ಕರೆಯೋಣ."

ಅಮ್ಮ ಒಂದು ಗಳಿಗೆ ಯೋಚಿಸಿ "ಹಾಗೇ ಆಗಲಿ" ಎಂದರು.

ರಾತ್ರಿ ರಾಹುಲ ಸರಿಯಾಗಿ ನಿದ್ದೆ ಮಾಡಲಿಲ್ಲ. ತಾಯಿಯ ಬೆಚ್ಚನೆಯ ದೇಹದಾಶ್ರಯ ಪ್ರೀತಿಯ ನೆಕ್ಕುವಿಕೆ, ಇಂದದರ ಪಾಲಿಗೆ ಇಲ್ಲವಾಗಿತ್ತು. ವರಾಂಡದ ಮೂಲೆಯಲ್ಲಿ ಎರಡು ಗೋಣಿಚೀಲ ಹಾಸಿ ರಾಹುಲನಿಗೆ ಮಲಗಲು ಹಾಸಿಗೆ ತಯಾರು ಮಾಡಿದೆ. ಆದರೆ ಅದೇಕೋ ರಾಹುಲ ರಾತ್ರಿಯೆಲ್ಲಾ ನರಳುವ ಧ್ವನಿಯಲ್ಲಿ ಕೂಗುತ್ತಲೇ ಇದ್ದ. ನಾನು ಗಳಿಗೆಗಿಪ್ಪತ್ತು ಬಾರಿ ಅದರ ಬಳಿಗೆ ಹೋಗಿ ಮೈ ಸವರಿ, ಮುದ್ದು ಮಾಡಿ, ಮಾತನಾಡಿಸಿ ಬರುತ್ತಿದ್ದೆ. ನಾನು ಅದರ ಬಳಿ ನಿಂತಿರುವವರೆಗೆ ರಾಹುಲ ತನ್ನ ಕಿರಿಚಾಟಕ್ಕೆ ವಿರಾಮ ಕೊಡುತ್ತಿದ್ದ. ನಾನು ದೀಪ ಆರಿಸಿ ಹಿಂದಿರುಗಿದನೆಂದರೆ ಪುನಃ ಕೂಗಲು ಪ್ರಾರಂಭಿಸಿ ಬಿಡುತ್ತಿದ್ದ.

ಅಂತು ರಾತ್ರಿ ಯಾರಿಗೂ ಕಣ್ಣು ಮುಚ್ಚಲು ಸಾಧ್ಯವಾಗಲಿಲ್ಲ. ಅಜ್ಜಿಯಂತೂ ಸಿಟ್ಟಿನಿಂದ ಗೊಣಗುಟ್ಟಿದರು.

"ಕೊನೆಗಾಲದಲ್ಲಿ ಇದೆಲ್ಲಿಯ ಕಾಟ? ಹಾಯಾಗಿ ಒಂದು ಗಳಿಗೆ ನಿದ್ದೆ ಮಾಡಲೂ ಬಿಡುವುದಿಲ್ಲ. ಹೀಗಾದರೆ ನಾವು ಮನೆಯಲ್ಲಿರುವುದು ಹೇಗೆ?"

ನಾನು ತಾಳ್ಮೆಯಿಂದ ಅಜ್ಜಿಯ ಗುಡುಗಾಟ ಕೇಳಿದೆ. ಕೊನೆಗೆ "ಸುಮ್ಮನಿರಿ ಅಜ್ಜಿ. ಪಾಪ, ಮರಿ ತಾಯಿಾನ ಬಿಟ್ಟು ಬಂದಿದೆ. ಅದಕ್ಕೆ ತಾಯಿಯದೇ ನೆನಪು. ನೀವು ಹನ್ನೊಂದನೇ ವರ್ಷದಲ್ಲಿ ಮದುವೆಯಾಗಿ ತಾಯಿ ಮನೆಯಿಂದ ಅತ್ತೆ ಮನೆಗೆ ಹೋದಾಗ ರಾತ್ರಿಯೆಲ್ಲಾ ನಿದ್ದೆ ಮಾಡದೇ ಒಂದೇ ಸಮ ಕಣ್ಣೀರು ಹಾಕಿದೆ ಅಂತ ನೀವೇ ಹೇಳಿರಲಿಲ್ಲವೇ? ಹಾಗೆ ರಾಹುಲನೂ ತಾಯಿಯನ್ನು ನೆನಸಿಕೊಂಡು ಅಳುತ್ತಾ ಇದ್ದಾನೆ" ಎಂದೆ.

ನನ್ನ ಮಾತು ಕೇಳಿ ಅಮ್ಮ ನಕ್ಕುಬಿಟ್ಟಳು. ಅಜ್ಜಿ ಸಿಟ್ಟು, ವಾತ್ಸಲ್ಯ ಬೆರೆತ ದನಿಯಲ್ಲಿ "ಅಬ್ಬ! ಬಿತ್ತರಿ ಕಣೇ ನೀನು - ನಾನು ಎಂದೋ ಹೇಳಿದ್ದನ್ನು ಇನ್ನೂ ಜ್ಞಾಪಕದಲ್ಲಿಟ್ಟುಕೊಂಡು ನನಗೇ ತಿರುಗಿಸುತ್ತಿದ್ದಾಳೆ" ಎಂದರು.

ರಾಹುಲ ನಮ್ಮ ಮನೆಗೆ ಹೊಂದಿಕೊಳ್ಳಲು ಒಂದು ವಾರ ಬೇಕಾಯಿತು. ಕ್ರಮೇಣ ಅವನ ಕಿರುಚುವಿಕೆ ಮೊಂಡತನ ಭೀತಿ ಮಾಯವಾಯಿತು. ರಾಹುಲನಿಗಾಗಿ ಹರಿದ ಬಟ್ಟೆಗಳನ್ನು ಜೋಡಿಸಿ ಬೆಚ್ಚನೆಯ ಮೃದು ಹಾಸಿಗೆಯನ್ನು ಸಿದ್ಧಮಾಡಿದೆ. ಅವನ ಕೊರಳಿನಲ್ಲಿ ಸಣ್ಣ ಚಿಕ್ಕಳದ ಪಟ್ಟಿಯೊಂದು ಶೋಭಿಸತೊಡಗಿತು. ಹಾಲಿಗಾಗಿ ಗಾಜಿನ ಅಗಲವಾದ ತಟ್ಟೆಯೊಂದು ರಾಹುಲನಿಗೆ ಮೀಸಲಾಯಿತು. ಚೆನ್ನ ವಾರಕ್ಕೊಂದು ಬಾರಿ ರಾಹುಲನಿಗೆ ಸಾಬೂನು ಉಜ್ಜಿ ಸ್ನಾನ ಮಾಡಿಸುತ್ತಿದ್ದ.

ನಾನು, ರಾಹುಲ ಗೆಳೆಯರಾದೆವು. ಸಂಜೆ ಶಾಲೆಯಿಂದ ಮನೆಗೆ ಬಂದೊಡನೆ ರಾಹುಲನನ್ನು ಕರೆದುಕೊಂಡು ಗಾಳಿ ಸಂಚಾರಕ್ಕೆ ಹೊರಡುತ್ತಿದ್ದೆ. ಹಾಲನ್ನವನ್ನು ಇತರರಿಗೆ ಹಾಕಲು ಬಿಡದೆ ನಾನೇ ಹಾಕುತ್ತಿದ್ದೆ. ರಾಹುಲನಿಗೆ ಸ್ನಾನ ಮಾಡಿಸುವುದು ಮಾತ್ರ ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ರಾಹುಲ ನೀರು ಕಂಡರೆ ಒಂದು ಮಾರು ದೂರ ಹಾರಿ ಹೋಗುತ್ತಿದ್ದ. ಒಂದು ದಿನ ನಾನೇ ಸ್ನಾನ ಮಾಡಿಸಲು ಯತ್ನಿಸಿದಾಗ ರಾಹುಲನ ಕೊಸರಾಟದಿಂದಾಗಿ ನಾನು ನೀರಿನ ತೊಟ್ಟಿಯೊಳಗೆ ಬಿದ್ದೆ. ರಾಹುಲ ತೊಟ್ಟಿಯ ಬಳಿ ನಿಂತು ಪ್ರೀತಿಯಿಂದ ಬಾಲ ಅಲುಗಾಡಿಸುತ್ತಾ ಇದ್ದ. ಅಂದಿನಿಂದ ರಾಹುಲನಿಗೆ ನಾನು ಸ್ನಾನ ಮಾಡಿಸಲಿಲ್ಲ.

ರಾಹುಲನಿಗೆ ಅಜ್ಜಿಯ ಆಚಾರ, ಮಡಿ ಅಭ್ಯಾಸ ಮಾಡಿಸುವುದು ಸ್ವಲ್ಪ ಕಷ್ಟವಾಯಿತು. ನಮ್ಮೆಲ್ಲರನ್ನು ನೋಡಿದ ಕೂಡಲೇ ಹಾರಿ ಬಂದು ಮುಂಗಾಲನ್ನೆತ್ತಿ ನಮ್ಮ ಮೇಲೆ ಇಟ್ಟು ನಾವು ಮೈಸವರಿ ಒಂದೆರಡು ಮಾತನಾಡಿದ ನಂತರ ಕೆಳಗಿಳಿಯುತ್ತಿದ್ದ. ಸಾಧಾರಣವಾಗಿ ಅಜ್ಜಿ ಹೊರಗೆ ಬರುವಾಗ ಯಾರಾದರೂ ರಾಹುಲನನ್ನು ಹಿಡಿದುಕೊಳ್ಳುತ್ತಿದ್ದರು. ಒಂದು ಬಾರಿ ಅಜ್ಜಿ ರಾಹುಲನನ್ನು ಕಟ್ಟಿರಬೇಕೆಂದು ತಿಳಿದು ಹೊರಗೆ ಬಂದರು. ರಾಹುಲ ಅವರನ್ನೂ ಎಲ್ಲರಂತೆಯೇ ಎಂದು ಭಾವಿಸಿ ಅವರ ಮೈಮೇಲೆ ಹಾರಿದ. ಅಜ್ಜಿ ಕಿಟಾರನೆ ಕಿರುಚಿ ಒಳಗೋಡಿ ಬಂದರು.

"ಋಷಿಪಂಚಮಿ ಮಾಡಿದ್ದಕ್ಕೆ ಈ ಹಾಳು ಮೈಲಿಗೆ ಬೇರೆ ಬೆರೆಯಿತು. ಇನ್ನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು" ಎಂದು ರಾಹುಲನನ್ನು ಶಪಿಸಿದರು. ಚೆನ್ನ ರಾಹುಲನನ್ನು ಹಿಡಿದು ಚೆನ್ನಾಗಿ ಬಡಿದ. ಅಜ್ಜಿ ಪಂಚಾಕ್ಷರೀ ಜಪ, ತಪ, ಉಪವಾಸ, ದಾನ ಮಾಡಿ, ಪಂಚಗವ್ಯ ಕೊಂಡುಕೊಂಡು ಪಾಪದಿಂದ ಮುಕ್ತರಾದರು. ಅಂದಿನಿಂದ ರಾಹುಲ ಅಜ್ಜಿಯ ಬಳಿ ಸುಳಿಯುತ್ತಿರಲಿಲ್ಲ. ಅಜ್ಜಿಯನ್ನು ನೋಡಿ ದೂರದಿಂದಲೇ ಬಾಲ ಅಲುಗಿಸಿ ತನ್ನ ಪ್ರೀತಿ, ಗೌರವ ವ್ಯಕ್ತಗೊಳಿಸುತ್ತಿದ್ದ. ಅಜ್ಜಿ ರಾಹುಲನನ್ನು ನೋಡಿ: "ಲೀಲಾ, ಇದರ ಬುದ್ಧಿ ನೋಡು. ಆವತ್ತು ಚೆನ್ನ ಹೊಡೆದಾಗಿನಿಂದ ನನ್ನ ಬಳಿ ಸುಳಿಯೋಲ್ಲ" ಎಂದು ಪ್ರಶಂಸೆ ಮಾಡಿದರು. ಹಪ್ಪಳ, ಸಂಡಿಗೆಯನ್ನು ಒಣಗಲೆಂದು ಬಿಸಲಿನಲ್ಲಿ ಇಟ್ಟಾಗ ರಾಹುಲ ಕಣ್ಣು ಪಿಳುಕಿಸದೆ ಕಾಗೆಗಳು ಹತ್ತಿರ ಬಾರದಂತೆ ಕಾಯತೊಡಗಿದಾಗಿನಿಂದ ಅಜ್ಜಿಗೆ ರಾಹುಲ ಅಚ್ಚುಮೆಚ್ಚು. ಒಂದು ಬಾರಿ ರಾಹುಲನ ಬೊಗಳಾಟದಿಂದಾಗಿ ಕಳ್ಳತನಕ್ಕೆ ಮುಂಚೆ ಮನೆಯವರೆಲ್ಲರಿಗೂ ಎಚ್ಚರವಾದಾಗಿನಿಂದ ಅಜ್ಜಿ ಎಲ್ಲರಿಗಿಂತಲೂ ಹೆಚ್ಚಾಗಿ ರಾಹುಲನನ್ನು

ಹೊಗಳ ತೊಡಗಿದರು. "ಯಾವ ಜನ್ಮದ ಋಣಾನುಬಂಧವೋ, ತನ್ನ ದೇಹಾನ ಈ ಮನೆ ಸೇವೆಗೆ ಮೀಸಲು ಮಾಡಿದೆ. ಅದನ್ನು ಕಡೆಗಾಣಿಸಿದರೆ ದೇವರು ಮೆಚ್ಚೋದಿಲ್ಲ" ಎಂದು ಅಜ್ಜಿ ನಿರ್ಧಾರ ಮಾಡಿದರು. ರಾತ್ರಿ ಹೊತ್ತಿನ ಫಲಾಹಾರದಲ್ಲಿ ರಾಹುಲನಿಗೂ ಒಂದು ಪಾಲು ಸಿಕ್ಕತೊಡಗಿತು.

ರಾಹುಲ ನಮ್ಮ ಮನೆಗೆ ಬಂದು ಒಂದು ವರ್ಷವಾಗುತ್ತಾ ಬಂದಿತು. ಮನೆಗೆ ಬಂದಾಗ ಒಂದು ಹಿಡಿಯಲ್ಲಿ ಎತ್ತಬಹುದಾಗಿದ್ದ ರಾಹುಲ ಈಗ ರಾಕ್ಷಸಾಕಾರ ತಾಳಿದ್ದ. ಮೊದಲಿನಂತೆ ಅವನನ್ನು ಎತ್ತುವುದು ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ಅವನನ್ನು ನೋಡಿದರೆ ಬಲಿಷ್ಠವಾದ ಕಪ್ಪು ಕರಡಿಯೊಂದನ್ನು ನೋಡಿದಂತೆ ಆಗುತ್ತಿತ್ತು. ಅನ್ನ ಹಾಲು ಬ್ರೆಡ್ಡು, ವಾರಕ್ಕೊಂದು ಸಲ ಚೆನ್ನ ಬೇಯಿಸಿ ಹಾಕುತ್ತಿದ್ದ ಮೂಳೆ ಮಾಂಸದಿಂದಾಗಿ ರಾಹುಲ ಯಾವ ತಡೆಯೂ ಇಲ್ಲದೆ ಸ್ವೇಚ್ಛೆಯಾಗಿ ಬೆಳೆದಿದ್ದ. ರಾಹುಲ ಮುಂಗಾಲನೆತ್ತಿ ಹಿಂಗಾಲಿನ ಮೇಲೆ ನಿಂತಾಗ ನಮ್ಮಿಬ್ಬರ ಎತ್ತರ ಒಂದೇ ಸಮನಾಗಿರುತ್ತಿತ್ತು. ಕಾಂಪೌಂಡಿನ ಒಂದು ಹುಲ್ಲು ಕಡ್ಡಿ ಅಲುಗದ ಹಾಗೆ ರಾಹುಲ ಮನೆಯನ್ನು ಕಾಯುತ್ತಿದ್ದ. ಪರಿಚಿತರಲ್ಲಿ ಎಷ್ಟು ಪ್ರೀತಿ, ವಿಶ್ವಾಸ ಪ್ರದರ್ಶಿಸುತ್ತಿದ್ದನೋ ಅಪರಿಚಿತರನ್ನು ಕಂಡರೆ ಅಷ್ಟೇ ಸಿಟ್ಟನ್ನೂ ಪ್ರದರ್ಶಿಸುತ್ತಿದ್ದ. ಅವನ ಗಾತ್ರ, ಬಣ್ಣ, ಚಾಚಿದ ಕೆಂಪು ನಾಲಿಗೆ ನೋಡಿ ಮಕ್ಕಳು ಹೆದರಿಕೊಳ್ಳುತ್ತಿದ್ದರು. ರಾಹುಲ ನನ್ನ ಗೆಳೆಯನಲ್ಲದೆ, ಕಾವಲುಗಾರನೂ ಆಗಿದ್ದ. ಸಂಜೆಯ ಹೊತ್ತು ತಿರುಗಾಡುವಾಗ ಮೊದಲು ಚೆನ್ನ ನನ್ನೊಡನೆ ಬರುತ್ತಿದ್ದ. ಈಗ ಚೆನ್ನನಿಗೆ ಬದಲಾಗಿ ರಾಹುಲ ಬರುತ್ತಿದ್ದ. ರಾಹುಲ ಜೊತೆಯಲ್ಲಿದ್ದರೆ ಅರ್ಧ ರಾತ್ರಿಯಲ್ಲಿ ಊರು ಸುತ್ತಿ ಬರುವ ಧೈರ್ಯ ನನ್ನಲ್ಲಿತ್ತು. ನಾನು, ಅಜ್ಜಿ ದೇವಸ್ಥಾನಕ್ಕೆ ಹೊರಟರೆ ರಾಹುಲ ಹಿಂಬಾಲಿಸುತ್ತಿದ್ದ. ದೇವಸ್ಥಾನದ ಬಾಗಿಲಿನಲ್ಲಿ ನಾನು ಬಿಟ್ಟ ಚಪ್ಪಲಿ ಕಾಯುತ್ತಾ ಕುಳಿತಿದ್ದು, ಆಮೇಲೆ ಅಜ್ಜಿ ಕೊಟ್ಟ ಬಾಳೆ ಹಣ್ಣನ್ನು ತಿಂದು ನಮ್ಮನ್ನು ಹಿಂಬಾಲಿಸುತ್ತಿದ್ದ. ಮನೆಯವರೆಲ್ಲರ ಪ್ರೀತಿ, ವಿಶ್ವಾಸ, ಲಕ್ಷ್ಯ ರಾಹುಲನಲ್ಲಿ ಕೇಂದ್ರೀಕೃತವಾಗಿದ್ದವು.

ನನ್ನ ಗೆಳತಿ ಮಾಲತಿಯ ತಂದೆಗೆ ಬೆಂಗಳೂರಿಗೆ ವರ್ಗವಾಯಿತು. ಮಾಲತಿ ಬೆಂಗಳೂರಿಗೆ ಹೋಗುವ ಮುನ್ನ "ಲಿಲ್ಲಿ" ಯ ಮರಿ "ರಾಣಿ" ಯನ್ನು ತನ್ನ ಜ್ಞಾಪಕಾರ್ಥವಾಗಿ ನನಗೆ ಕಾಣಿಕೆಯಾಗಿ ಕೊಟ್ಟಳು. ಆಗ ರಾಣಿ ಹತ್ತು ದಿನದ ಮರಿ. ರಾಣಿಯ ದೇಹ ಬೆಳದಿಂಗಳಿನಿಂದ ನಿರ್ಮಿಸಿದಂತಿತ್ತು. ರಾಣಿಯದು ಸ್ವಚ್ಛವಾದ, ನಿರ್ಮಲವಾದ ಬಿಳಿಯ ಬಣ್ಣ. ಕಣ್ಣಿನಲ್ಲಿ ಕಣ್ಣಿಟ್ಟು ಹುಡುಕಿದರೂ ಕಪ್ಪು ರೋಮ ಕಾಣಿಸುತ್ತಿರಲಿಲ್ಲ. ನಸುನೀಲಿ ಛಾಯೆಯ ಮೇಲಿದ್ದ ಕೋಮಲವಾದ ಹೊಳವುಗಣ್ಣುಗಳು. ರಾಹುಲನದು ಭೀಷಣ ಸೌಂದರ್ಯವಾದರೆ ರಾಣಿಯದು ಶಾಂತ ಸೌಂದರ್ಯ. ಬಿರುಗಾಳಿಯ ಹೊಡೆತಕ್ಕೆ ಭೋರ್ಗರೆವ ಸಮುದ್ರ ರಾಹುಲನಾದರೆ, ಶಾಂತವಾಗಿ ಬಯಲಿನಲ್ಲಿ ಹರಿಯುವ ನದಿಯಂತೆ ರಾಣಿ.

ರಾಣಿಯನ್ನು ನೋಡಿದ ಕೂಡಲೆ ನನ್ನ ಮನಸ್ಸು ಅದರ ಕಡೆ ಒಲಿ ಯಿತು. ಮಾಲತಿ 'ರಾಣಿ'ಯನ್ನು ನನಗೆ ಕೊಟ್ಟಾಗ ರಾಹುಲನಿಗೆ ಜೊತೆಯಾಯಿತು ಎಂದುಕೊಂಡು ಮನೆಗೆ ಕರೆದುಕೊಂಡು ಬಂದೆ. ರಾಣಿಯನ್ನು ಎತ್ತಿಕೊಂಡು ರಾಹುಲನ ಹತ್ತಿರ ಹೋಗಿ "ನಿನ್ನ ರಾಣಿ ಹೇಗಿದ್ದಾಳೆ ನೋಡು" ಎಂದೆ. ರಾಹುಲ ಅಸಮ್ಮತಿಯಿಂದ ಗುರುಗುಟ್ಟಿದ. ರಾಹುಲನ ರಾಕ್ಷಸ ಸ್ವರೂಪ, ಗುರುಗುಟ್ಟುವಿಕೆಗೆ ಹೆದರಿ ರಾಣಿ ಹಿಮ್ಮೆಟ್ಟಿದಳು. "ಥೂ ಕತ್ತೆ, ಮರೀನ ಹಾಗೆಲ್ಲಾ ಹೆದರಿಸುತ್ತಾರೇನೋ" ಎಂದು ಬೆನ್ನಿನ ಮೇಲೆ ಮೃದುವಾಗಿ ಹೊಡೆದೆ. ರಾಣಿಗಾಗಿ ಗಾಜಿನ ತಟ್ಟೆ ತಂದಿರಲಿಲ್ಲವಾದ ಕಾರಣ ನಾನು ರಾಹುಲನ ಮುಂದಿದ್ದ ತಟ್ಟೆ ತೆಗೆದುಕೊಂಡು ಹೋಗಿ ರಾಣಿಯ ಮುಂದಿಟ್ಟು ಹಾಲು ಹಾಕಿ, ಅದು ಹಾಲು ಹೀರುವುದನ್ನೇ ನೋಡುತ್ತಾ ಕುಳಿತೆ. ರಾಹುಲ ಪ್ರಶ್ನಾರ್ಥಕವಾಗಿ ನನ್ನ ಕಡೆ ನೋಡಿ ಬೊಗಳಿದ.

"ಚೆನ್ನಾ ರಾಹುಲನಿಗೆ ಅನ್ನ ಹಾಕು" ಎಂದು ಕುಳಿತಲ್ಲಿಂದಲೇ ಹೇಳಿದೆ. ಚೆನ್ನ ಒಂದು ಕರಟದಲ್ಲಿ ಕಲೆಸಿದ ಹಾಲನ್ನ ತಂದು ರಾಹುಲನ ಮುಂದಿಟ್ಟ. ರಾಹುಲ ನಮ್ಮ ಮನೆಗೆ ಬಂದಾಗಿನಿಂದ ಒಂದು ದಿನವಾದರೂ ನಾನು ಇತರರಿಗೆ ಅನ್ನ ಹಾಕಲು ಬಿಟ್ಟಿರಲಿಲ್ಲ. ಈ ದಿನ ಚೆನ್ನ ಕರಟದಲ್ಲಿ ಹಾಲನ್ನ ತಂದಿರಿಸಿದುದನ್ನೂ ರಾಣಿ ತನ್ನ ತಟ್ಟೆಯಲ್ಲಿ ನನ್ನ ಕೈಯಿಂದ ಹಾಲು ಹಾಕಿಸಿಕೊಂಡು ಕುಡಿಯುತ್ತಿರುವುದನ್ನೂ ನೋಡಿ ರಾಹುಲನಿಗೆ

ಕೋಪ ಬಂದಿತು. ಕರಟದಲ್ಲಿ ಅನ್ನಕ್ಕೆ ಬಾಯಿ ಸಹ ಹಾಕದೇ ಬೊಗಳಿ ತನ್ನ ಅಸಮಾಧಾನ ವ್ಯಕ್ತಪಡಿಸಿದ. "ಮೊಂಡಾಟ ಬೇರೆ ಮಾಡ್ತೀಯಾ" ಎನ್ನುತ್ತಾ ನಾನು ಅವನ ತಟ್ಟೆಯಲ್ಲಿಯೇ ಅನ್ನ ಹಾಕಿದ ನಂತರ ರಾಹುಲ ಅನ್ನವನ್ನು ತಿಂದು ತೃಪ್ತನಾದ.

ರಾತ್ರಿಯಾದ ಕೂಡಲೇ ರಾಣಿ ಚಳಿಯಿಂದ ನಡುಗಿದಳು. ಎಳೆಯ ಮರಿಗೆ ಚಳಿ ಅಭ್ಯಾಸವಿಲ್ಲವೆಂದು ನಾನು ರಾಹುಲನ ಹಾಸಿಗೆ ತೆಗೆದು ರಾಣಿಯನ್ನು ಮಲಗಿಸಿ, ರಾಹುಲನಿಗೆ ಮಲಗಿಕೊಳ್ಳಲು ಒಂದು ಗೋಣಿಯ ಚೀಲ ತೆಗೆದುಕೊಂಡು ಹೋಗಿ ಬಳಿಯಲ್ಲಿರಿಸಿದೆ. ಆದರೆ ಹಠ ಸ್ವಭಾವದ ರಾಹುಲ ಗೋಣಿ ಚೀಲದ ಮೇಲೆ ಮಲಗದೆ ರಾತ್ರಿ ನೆಲದ ಮೇಲೆಯೇ ನಿದ್ದೆಮಾಡಿದ.

ರಾಣಿ ಇನ್ನೂ ಮರಿಯಾದುದರಿಂದಲೂ ಮನೆಗೆ ಹೊಸದಾಗಿ ಬಂದು ಸೇರಿದ್ದಾದ್ದರಿಂದ ಅದನ್ನು ಪಳಗಿಸಲು ನಾನು ರಾಣಿಯೊಡನೆ ಹೆಚ್ಚು ಸಮಯವನ್ನು ಕಳೆಯುತ್ತಿದ್ದೆ. ಅಜ್ಜಿಯ ಆಚಾರ ಕಲಿಸಬೇಕಾದ್ದರಿಂದಲೂ, ಅಡಿಗೆ ಮನೆಗೆ ಹೋಗದಂತೆ ನೋಡಿಕೊಳ್ಳಬೇಕಾದುದರಿಂದಲೂ ನಾನು ಯಾವಾಗಲೂ ರಾಣಿಯೊಡನೆ ಕಾಲ ಕಳೆಯುತ್ತಿದ್ದೆ. ಆದರೆ ರಾಹುಲನಿಗೆ ಯಾವುದನ್ನೂ ಕಡಿಮೆ ಮಾಡಿರಲಿಲ್ಲ, ಚೆನ್ನ, ನನ್ನ ಬದಲು ರಾಹುಲನನ್ನು ನೋಡಿಕೊಳ್ಳುತ್ತಿದ್ದ. ಬುದ್ಧಿ ಬಂದ ರಾಹುಲ ತನ್ನನ್ನು ನೋಡಿಕೊಳ್ಳಬಲ್ಲ ಎಂಬ ವಿಶ್ವಾಸ ನನಗಿತ್ತು.

ರಾಣಿ ನಮ್ಮ ಮನೆಗೆ ಬಂದು ಸುಮಾರು ಒಂದು ತಿಂಗಳಾಗುತ್ತಾ ಬಂದಿದ್ದರೂ ರಾಹುಲ, ರಾಣಿ ಗೆಳೆಯರಾಗಲಿಲ್ಲ, ರಾಣಿ, ರಾಹುಲನ ಮೈತ್ರಿಗಾಗಿ ಹಾತೊರೆಯುತ್ತಿದ್ದಳು. ಅವನ ಸ್ನೇಹ ದೊರಕಿಸಿಕೊಳ್ಳಲು ರಾಣಿ ಶತಪ್ರಯತ್ನ ಮಾಡುತ್ತಿದ್ದಳು. ಆದರೆ ರಾಹುಲನಿಗೆ ರಾಣಿಯ ತಲೆ ಕಂಡರಾಗುತ್ತಿರಲಿಲ್ಲ, ರಾಣಿಯನ್ನು ನೋಡಿದರೆ, ಹತ್ತಿರ ಸುಳಿದರೆ ರಾಹುಲ ಹುಲಿಯಂತೆ ಗುರುಗುಟ್ಟುತ್ತಿದ್ದ. ಆದರೂ ರಾಣಿ ತನ್ನ ಪ್ರಯತ್ನ ಬಿಡಲಿಲ್ಲ, ಒಂದೊಂದೇ ಹೆಜ್ಜೆ ಮುಂದೆ ಬಂದು ರಾಹುಲನನ್ನು ವಶಪಡಿಸಿಕೊಳ್ಳಲು ಯತ್ನಿಸುತ್ತಿದ್ದಳು.

ಒಂದು ದಿನ ಸಂಜೆ ನಾನು ಯಾವುದೋ ಪುಸ್ತಕ ಓದುತ್ತಾ ಕಲ್ಲು ಬೆಂಚಿನ ಮೇಲೆ ಕುಳಿತಿದ್ದೆ. ರಾಣಿ ಚೆಂಡಿನೊಡನೆ ಆಟವಾಡುತ್ತಾ ಅತ್ತಿಂದಿತ್ತ ಓಡಾಡುತ್ತಿದ್ದಳು. ರಾಹುಲನನ್ನು ಹತ್ತಿರದಲ್ಲಿಯೇ ಇದ್ದ ಗಿಡವೊಂದಕ್ಕೆ ಕಟ್ಟಿಹಾಕಿದ್ದೆ. ಅವನನ್ನು ಬಿಚ್ಚಿದ್ದರೆ ನನ್ನ ಸ್ನೇಹಿತೆಯರು ಕಾಂಪೌಂಡಿನಲ್ಲಿ ಕಾಲಿಡಲು ಹೆದರುತ್ತಿದ್ದರು. "ನೀನು ರಾಹುಲನನ್ನು ಕಟ್ಟಿದ್ದರೆ ಮಾತ್ರ ಬರುತ್ತೀವಮ್ಮ" ಎಂದು ನಮ್ಮ ಮನೆಗೆ ಬರುವ ಮುನ್ನ ಹೇಳುತ್ತಿದ್ದರು. ಆ ದಿನ ಸಂಜೆ ಸಾವಿತ್ರಿ ಮನೆಗೆ ಬರುವುದಾಗಿ ಹೇಳಿದ್ದಳು. ಆದುದರಿಂದ ನಾನು ರಾಹುಲನನ್ನು ಹತ್ತಿರವಿದ್ದ ಸುರುಗಿಯ ಮರಕ್ಕೆ ಕಟ್ಟಿಹಾಕಿದ್ದೆ. ರಾಣಿ ಚೆಂಡಾಟವಾಡುತ್ತಿದ್ದುದನ್ನೇ ನೋಡುತ್ತಾ ರಾಹುಲ ಮಲಗಿದ್ದ. ರಾಣಿ ಚೆಂಡನ್ನು ತನ್ನ ಬಾಯಲ್ಲಿ ಕಚ್ಚಿ ಹಿಡಿಯಲು ಯತ್ನಿಸುತ್ತಿದ್ದಳು. ಚೆಂಡು ಜಾರಿ ದೂರ ಉರುಳುತ್ತಿತ್ತು. ರಾಣಿ ಚೆಂಡಿನ ಹಿಂದೆ ಓಡಿ ಪುನಃ ಕಚ್ಚಲು ಯತ್ನಿಸುತ್ತಿದ್ದಳು. ಒಂದು ಸಲ ಚೆಂಡು ರಾಹುಲನ ಹತ್ತಿರ ಉರುಳಿಕೊಂಡು ಹೋಯಿತು. ರಾಣಿ ಅಳುಕುತ್ತಾ, ಹಿಂಜರಿಯುತ್ತಾ ರಾಹುಲನ ಮುಖವನ್ನು ಸಂದೇಹದಿಂದ ನೋಡುತ್ತಾ ಒಂದೊಂದೇ ಹೆಜ್ಜೆ ಮುಂದುವರಿದಳು. ರಾಣಿ ಧೈರ್ಯ ಮಾಡಿ ಅವನ ಬಳಿ ನುಸುಳಿ ಚೆಂಡನ್ನು ಕಚ್ಚುವಷ್ಟರಲ್ಲಿ ರಾಹುಲ ಭಯಂಕರವಾಗಿ ಬಗುಳಿ ರಾಣಿಯ ಮೇಲೆ ಬಿದ್ದ. ರಾಣಿಯ ಆರ್ತನಾದ ನನ್ನ ಹೃದಯವನ್ನು ಕಲಕಿತು. ಕೈಲಿ ಹಿಡಿದಿದ್ದ ಪುಸ್ತಕ ಬಿಸಾಡಿ ರಾಹುಲನ ಬಳಿಗೆ ಓಡಿಹೋದೆ. ರಾಹುಲ ತನ್ನ ಮೊನಚಾದ ಹಲ್ಲುಗಳಿಂದ ರಾಣಿಯ ಬೆನ್ನಿನ ಮೇಲೆ ಕಡಿದಿದ್ದ. ನಾನು ಕಾಲಿನಿಂದ ರಾಹುಲನನ್ನು ಒದ್ದು ದೂರ ತಳ್ಳಿ ರಾಣಿಯನ್ನು ಎತ್ತಿಕೊಂಡೆ. ರಾಣಿ ಭೀತಿಯಿಂದ ಅರಳೀ ಎಲೆಯಂತೆ ಗಡಗಡನೆ ನಡುಗುತ್ತಿದ್ದಳು. ರಾಹುಲ ಕ್ರೋಧದಿಂದ ಗುರುಗುಟ್ಟುತ್ತಾ ಎಗರಾಡುತ್ತಿದ್ದ. ಅವನ ಚಾಚಿದ ನಾಲಿಗೆಯಿಂದ ಜೊಲ್ಲು ತೊಟ್ಟಿಕ್ಕುತ್ತಿತ್ತು. ಅವನ ಸ್ವರೂಪ ನೋಡಿ ನನಗೂ ಸ್ವಲ್ಪ ಹೆದರಿಕೆಯಾಯಿತು. ಹಾಲಿನ ನೊರೆಯಂತೆ ಬಿಳುಪಾಗಿದ್ದ ರಾಣಿಯ ದೇಹದ ಮೇಲೆ ಅಲ್ಲಲ್ಲಿ ರಕ್ತದ ಕಲೆಯಿತ್ತು. ಕೋಮಲತೆಯೇ ಮೂರ್ತಿವೆತ್ತಂತಿದ್ದ ರಾಣಿಗೆ ರಾಹುಲ ಮಾಡಿದ ಗಾಯಗಳನ್ನು ನೋಡಿ ನನಗೆ ಕೋಪ ಬಂದಿತು. ರಾಹುಲನಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದು "ವಾಕಿಂಗ್ ಸ್ಟಿಕ್" ತಂದು ರಾಹುಲನನ್ನು ಥಳಿಸಿ ತೃಪ್ತಳಾದೆ.

ಅಂದಿನಿಂದ ನಾನು ರಾಣಿಯನ್ನು ಮತ್ತಷ್ಟು ಎಚ್ಚರಿಕೆಯಿಂದ ನೋಡಿಕೊಳ್ಳತೊಡಗಿದೆ.

ಹದಿನೈದು ದಿನಗಳ ನಂತರ ಒಂದು ಭಾನುವಾರದ ಮಧ್ಯಾಹ್ನ ನಾನು ರಾಹುಲನನ್ನು ಕಟ್ಟಿ ಹಾಕಿ, ಒಂದು ಗಳಿಗೆ ಮಲಗಿಕೊಳ್ಳೋಣವೆಂದು ಒಳಗೆ ಬಂದೆ. ನಾನು ಬಂದಿನ್ನು ಎರಡು ನಿಮಿಷಗಳಾಗಿರಲಿಲ್ಲ, ಅಷ್ಟರಲ್ಲಿ ರಾಣಿಯ ಚೀತ್ಕಾರ, ಆಕ್ರಂದನ ನನ್ನ ರಕ್ತವನ್ನು ಹೆಪ್ಪುಗಟ್ಟುವಂತ ಮಾಡಿತು. ನಾನು ಹೊರಗೆ ಓಡಿ ಬಂದೆ. ಅಲ್ಲಿಯ ದೃಶ್ಯ ನೋಡಿ ತಲೆ ತಿರುಗಿ ಕಣ್ಣು ಕತ್ತಲಿಟ್ಟಿತು. ರಾಹುಲ ರಾಣಿಯ ಬಿಳಿಯ ಶರೀರವನ್ನು ಬಾಯಲ್ಲಿ ಕಚ್ಚಿ ಹಿಡಿದು ಬಟ್ಟೆ ಒಗೆಯುವಂತೆ ನೆಲದ ಮೇಲೆ ಒಗೆಯುತ್ತಿದ್ದ. ರಾಣಿ ಗಳಿಗೆ ಗಳಿಗೆಗೂ ಕುಗ್ಗುತ್ತಿದ್ದ ದನಿಯಿಂದ ಚೀರುತ್ತಾ ಕೊಸರಾಡುತ್ತಿದ್ದಳು. ರಾಹುಲನ ಕಣ್ಣುಗಳು ಈರ್ಷ್ಯೆ, ಕೋಪ, ಪ್ರತೀಕಾರದ ಕೆಂಡಗಳನ್ನುಗುಳುತ್ತಿದ್ದವು. ರಾಹುಲನ ಭೀಕರ ಸ್ವರೂಪ, ಆವೇಶ ನೋಡಿ ನನಗೆ ಅವನ ಬಳಿ ಹೋಗಲು ಹೆದರಿಕೆಯಾಯಿತು.

"ಚೆನ್ನಾ, ಚೆನ್ನಾ..." ಎಂದು ಕೂಗಿದೆ. ನನ್ನ ಕೂಗು ಕೇಳಿ ಚೆನ್ನ, ಅಜ್ಜಿ, ಅಮ್ಮ ಎಲ್ಲರೂ ಓಡಿ ಬಂದರು.

"ಚೆನ್ನಾ, ರಾಣೀನ ಬಿಡಿಸು. ಅನ್ಯಾಯವಾಗಿ ಕೊಂದುಬಿಡುತ್ತದೆ" ನಾನು ಕೂಗಿದೆ. ಚೆನ್ನ ರಾಹುಲನ ಬಳಿ ನುಗ್ಗಿ ಬಲವಾಗಿ ಝಾಡಿಸಿ ಒದ್ದ. ರಾಹುಲ ಏಟಿನ ರಭಸ ತಡೆಯಲಾರದೇ ಹಿಂದಕ್ಕೊರಗಿ ಬಿದ್ದ. ರಾಣಿ ಅವನ ಬಾಯಿಂದ ತೊಟ್ಟು ಕಳಚಿದ ಹಣ್ಣಿನಂತೆ ನೆಲದ ಮೇಲೆ ಬಿತ್ತು. ಅದರ ದೇಹ ರಕ್ತಸಿಕ್ತವಾಗಿತ್ತು. ರಾಹುಲ ರಾಣಿಯ ಹೊಟ್ಟೆಯನ್ನು ಸೀಳಿ ಕರುಳು ಬಗೆದಿದ್ದ. ರಾಣಿಯ ಕಣ್ಣು ಅಡಿಗಡಿಗೆ ಮುಚ್ಚಿ ತೆಗೆಯುತ್ತಿತ್ತು. ಕಣ್ಣಿನಲ್ಲಿ ಮರಣ ಸಂಕಟವಿತ್ತು. ನೋವಿನಿಂದ ಕುಯ್ಗುಡುತ್ತಿದ್ದಂತೆಯೇ ರಾಣಿ ಅಂತಿಮ ಶ್ವಾಸ ಎಳೆಯಿತು.

ನಾನು ರಾಹುಲನ ಕಡೆ ತಿರುಗಿದೆ. ರಾಹುಲ ಏದುಸಿರು ಬಿಡುತ್ತಾ ಮಲಗಿದ್ದ. ಅವನ ನಾಲಿಗೆಯಿಂದ ರಕ್ತ ತೊಟ್ಟಿಕ್ಕುತ್ತಿತ್ತು. ನಾನು ಅವನ ಕಡೆ ನೋಡಿದೊಡನೆ ರಾಹುಲ ಎಂದಿನಂತೆ ಪ್ರೀತಿಯಿಂದ ಬಾಲ ಅಲುಗಿಸಿ ರಾಣಿಯ ನೀರವ ದೇಹವನ್ನೇ ನೋಡತೊಡಗಿದ. ಒಂದು ಬಗೆಯ ಸಮಾಧಾನ, ತೃಪ್ತಿಯಿಂದ ರಾಹುಲನ ಮುಖ ಪ್ರಸನ್ನಗೊಂಡಿತ್ತು.

"ಚೆನ್ನಾ, ರಾಹುಲನನ್ನು ಯಾರು ಬಿಚ್ಚಿದರು? ನಾನು ಕಟ್ಟಿಹಾಕಿದ್ದೆ". ಚೆನ್ನ ತಪ್ಪು ಮಾಡಿದವನಂತೆ "ಅದಕ್ಕೆ ಮೈ ತೊಳೀಬೇಕಾಗಿತ್ತು ಲೀಲವ್ವ. ಸರಪಳಿ ಬಿಚ್ಚಿ ಸೋಪು ತರೋಣಾಂತ ಒಳೀಕೆ ಬಂದೆ. ಅಷ್ಟರಲ್ಲಿ ಬಡಮುಂಡೇದರ ಜೀವತಗದದೆ" ಎನ್ನುತ್ತಾ ರಾಹುಲನ ಕೊರಳ ಪಟ್ಟಿ ಹಿಡಿದು ಸರಪಳಿ ಬಿಗಿದು ಕಟ್ಟಿ ಹಾಕಿದ.

ಅಮ್ಮ ಅಜ್ಜಿ ರಾಣಿಗಾದ ಸ್ಥಿತಿ ನೋಡಿ ಮರುಗಿದರು. ರಾಹುಲನ ಮೇಲೆ ನನಗೆ ರೋಷ ಉಕ್ಕಿತು. ಅವನನ್ನು ಹೊಡೆದು ಹಣ್ಣುಗಾಯಿ, ನೀರುಗಾಯಿ ಮಾಡಲೆಂದು ಒಂದು ಹೆಜ್ಜೆ ಮುಂದಿಟ್ಟೆ.

"ಹತ್ತಿರ ಹೋಗಬೇಡಾ ಕಣೆ, ಅದಕ್ಕೆ ಹುಚ್ಚು ಹಿಡಿದಿದೆ. ಆಮೇಲೆ ಕಚ್ಚಿಬಿಟ್ಟೀತು" ಎಂದು ಅಮ್ಮ ಚೀರಿದಳು.

"ಹುಚ್ಚು!" ನಾನು ಪ್ರತಿಮೆಯಂತೆ ನಿಂತುಬಿಟ್ಟೆ.

"ಹೌದು, ಇಲ್ಲದಿದ್ದರೆ ರಾಣೀನ ಯಾಕೆ ಕೊಲ್ಲುತ್ತಿದ್ದ? ಅಬ್ಬ! ಅದೂ ಹೇಗೆ ಕೊಂದಿದಾನೆ. ಅದರ ದೇಹವನ್ನೆಲ್ಲಾ ಮಾಂಸದ ಮುದ್ದೆ ಮಾಡಿಬಿಟ್ಟಿದೆ."

"ಹುಚ್ಚಿರಲಾರದಮ್ಮ, ನಾಯಿಗಳಿಗೆ ಹುಚ್ಚು ಹಿಡಿಯುವ ಕಾಲವಲ್ಲ ಇದು" ಅಜ್ಜಿ ದನಿಗೂಡಿಸಿದರು. "ನಿಂಗೇನು ತಿಳಿಯುತ್ತದೆ ಹೇಳು, ಹುಚ್ಚು ಹಿಡಿಯೋಕೆ ಯಾವ ಕಾಲವಾದರೇನು? ಅದರ ಹತ್ತಿರ ಹೋದರೆ ನನ್ನಾಣೆ."

ನಾನು ರಾಹುಲನ ಕಡೆ ಕನಿಕರದಿಂದ ನೋಡಿದೆ. ನನಗೆ ಅದರ ಮೇಲಿದ್ದ ಕೋಪ ಮಾಯವಾಯಿತು. ಆದರೆ ನನಗೆ ಮಾತ್ರ ರಾಹುಲನಲ್ಲಿ ಹುಚ್ಚುನಾಯಿಗಿರಬೇಕಾದ ಲಕ್ಷಣಗಳಾವುವೂ ಕಾಣಲಿಲ್ಲ, ರಾಹುಲನ ಮುಖ ಶಾಂತವಾಗಿತ್ತು - ನಿದ್ದೆ ಮಾಡುತ್ತಿರುವ ಮಗುವಿನ ಮುಖದಂತೆ.

"ಚೆನ್ನಾ, ಸಂಜೆ ನಾಯಿಗೆ ಹಾಕುವ ವಿಷ ತಗೊಂಡು ಬಾ. ಅನ್ನದ ಜೊತೆ ತಿನ್ನಿಸಿ ಬಿಡೋಣ. ಇನ್ನು ಇದನ್ನು ಮನೆಯಲ್ಲಿಟ್ಟುಕೊಳ್ಳುವುದು ಅಪಾಯ, ಮಕ್ಕಳು ಮರಿ..." "ಬೇಡಮ್ಮಾ ರಾಹುಲನನ್ನು ಕೊಲ್ಲಿಸಬೇಡ" ನಾನು ಅಳತೊಡಗಿದೆ.

"ಹುಚ್ಚು ನಾಯಿ ಮನೇಲಿಟ್ಟುಕೊಂಡು ಸಾಕುವುದು ಸಾಧ್ಯವೆ? ಅವಳು ಏನಾದರೂ ಹೇಳಲಿ. ವಿಷ ತಂದು ಬಿಡು ಚೆನ್ನ"

"ಆಗಲಿ ಕಣವ್ವ"

ನನ್ನ ಕಣ್ಣೀರಿಗೆ ತಾಯಿ, ತಂದೆ, ಅಜ್ಜಿ ಒಬ್ಬರೂ ಕರಗಲಿಲ್ಲ.

"ಇಲ್ಲಣ್ಣಾ, ಅದಕ್ಕೆ ಹುಚ್ಚಲ್ಲ, ರಾಣಿಯ ಮೇಲೆ ಅದೇನು ಕೋಪ, ಛಲವಿತ್ತೋ ತೀರಿಸಿಕೊಂಡಿದೆ. ಖಂಡಿತ ಹುಚ್ಚಿಲ್ಲ"

ನನ್ನ ಅಳು, ವಾದ, ಪ್ರತಿಭಟನೆಗೆ ಯಾರೂ ಬಗ್ಗಲಿಲ್ಲ.

ಮಾರನೆಯ ದಿನ ಬೆಳಿಗ್ಗೆ ಚೆನ್ನ ವಿಷಮಿಶ್ರಿತ ಹಾಲನ್ನು ತೆಗೆದುಕೊಂಡು ರಾಹುಲನ ಬಳಿಗೆ ಹೋದ. ರಾಹುಲ ಕೃತಜ್ಞತೆಯಿಂದ ನನ್ನ ಕಡೆ ನೋಡಿ ಬಾಲ ಅಲುಗಾಡಿಸಿದ. ನಿತ್ಯದಂತೆ ಮೇಲೆ ಹಾರಿ ಸ್ವಾಗತಿಸಲು ಪ್ರಯತ್ನಿಸಿದ. ಆದರೆ ಕಬ್ಬಿಣದ ಸರಪಳಿ ರಾಹುಲನನ್ನು ತಡೆಯಿತು. ಚೆನ್ನ ರಾಹುಲನ ಬಳಿ ಹೋಗಲು ಹೆದರಿ ಸ್ವಲ್ಪ ದೂರದಲ್ಲಿಯೇ ತಟ್ಟೆಯನ್ನಿಟ್ಟು ಅದರ ಮುಂದೆ ತಳ್ಳಿದ. ರಾಹುಲ ಅನ್ನದ ಕಡೆ ತಿರುಗದೆ ನನ್ನ ಕಡೆ ತಿರುಗಿ ನೆಗೆದಾಡತೊಡಗಿದ್ದ. ಈರ್ಷ್ಯೆ, ಕೋಪ ಮಾಯವಾಗಿ ರಾಹುಲ ಶಾಂತವಾಗಿದ್ದ. ರಾಹುಲ ಅನ್ನ ತಿನ್ನಲು ಪ್ರಯತ್ನಿಸದಿರುವುದನ್ನು ನೋಡಿ ಅಮ್ಮ "ಲೀಲೂ, ತಟ್ಟೇನ ನೀನೇ ಅದರ ಮುಂದಿಡು" ಎಂದರು.

ನನ್ನ ಮನಸ್ಸಿನಲ್ಲಿ ಹೋರಾಟ ಆರಂಭವಾಯಿತು, ಮುದ್ದಿನಿಂದ ಸಾಕಿದ ನಾಯಿಗೆ ಕೈಯಾರೆ ವಿಷ ಇಡಬೇಕಾಗುವುದನ್ನು ನೋಡಿ ಹೃದಯ ಕುಗ್ಗಿತು.

"ನನ್ನ ಕೈಲಿ ಆಗೋಲ್ಲಮ್ಮ"

"ಪರವಾಗಿಲ್ಲ, ತಟ್ಟೆ ಮುಂದಿಡು. ಅತೀ ಆಟ ಆಡಬೇಡ"

"ಊಹೂಂ, ಅಮ್ಮಾ ರಾಹುಲನಿಗೆ ಖಂಡಿತ ಹುಚ್ಚಿಲ್ಲ"

"ನಿನ್ನ ಮಾತು ಕೇಳುತ್ತಾ ಕುಳಿತುಕೊಳ್ಳೋಕೆ ಸಮಯವಿಲ್ಲ, ಚೆನ್ನಾ, ತಟ್ಟೆ ಇನ್ನೂ ಸ್ವಲ್ಪ ಮುಂದೆ ತಳ್ಳು. ಹಸಿದ ನಾಯಿ ಅನ್ನಕ್ಕೆ ಬಾಯಿ ಹಾಕದೆ ಇರುತ್ತದೆಯೇ?" ಅಜ್ಜಿ ಸಲಹೆ ಕೊಟ್ಟಳು. ಚೆನ್ನ ತಟ್ಟೆಯನ್ನು ಮತ್ತೂ ಮುಂದಕ್ಕೆ ತಳ್ಳಿದ. ರಾಹುಲ ಹಿಂದಿನ ದಿನದ ರಾತ್ರಿಯಿಂದಲೂ ಹಸಿದಿದ್ದ. ತನ್ನ ಕಡೆ ಆಗಾಗ್ಗೆ ನೋಡುತ್ತಾ ರಾಹುಲ ಗಬಗಬನೆ ಅನ್ನವನ್ನು ತಿನ್ನತೊಡಗಿದ. ರಾಹುಲನ ಬಾಲ ಮಾತ್ರ ನಿರಂತರವಾಗಿ ಅಲುಗುತ್ತಲೇ ಇತ್ತು . ಮುಂದೆ ನೋಡುವುದು ನನ್ನಿಂದ ಸಾಧ್ಯವಾಗಲಿಲ್ಲ. ರೂಮಿಗೆ ಬಂದು ಬಾಗಿಲು ಹಾಕಿಕೊಂಡು ಕುಳಿತೆ.

ಅಂದಿನಿಂದ ನಾನು ನಾಯಿಯನ್ನು ಸಾಕಲಿಲ್ಲ.

# ಸುಂದರ ಮತ್ತು ಚುಕ್ಕೆ ಬಾಲ

ಕರೂರು ನೀಲಕಂಠಪಿಳ್ಳೆ

ಹನ್ನೆರಡು ವರ್ಷದ ಸುಂದರ ಹಳ್ಳಿಯ ದನಗಳನ್ನ ನೋಡಿಕೊಳ್ಳುತ್ತಿದ್ದ. ಅವನ ಕೆಲಸಕ್ಕೆ ಅವನಿಗೆ ಸಿಕ್ಕುತ್ತಿದ್ದುದು ಅನ್ನ, ಪಲ್ಯ.

ಬೇಸಿಗೆಯಲ್ಲಿ ಒಂದು ದಿನ ಬೆಳಿಗ್ಗೆ ಬೇಗ ಅವನು ಮೇಯಿಸುವುದಕ್ಕೆ ಮೂರು ಹಸುಗಳನ್ನು ಹೊಡೆದು ಕೊಂಡು ಹೋದ. ಅವನು ಅವಕ್ಕೆ ಸುರುಳಿ ಕೊಂಬು, ಕಪ್ಪು ಕಣ್ಣು, ಚುಕ್ಕೆ ಬಾಲ ಎಂದು ಹೆಸರು ಕೊಟ್ಟಿದ್ದ. ಅವನು ತನ್ನ ಊಟವನ್ನ ಪ್ಯಾಕ್ ಮಾಡಿ ಹೆಗಲಮೇಲೆ ಹಾಕಿಕೊಂಡಿದ್ದ ಚೀಲದಲ್ಲಿ ಇಟ್ಟುಕೊಂಡಿದ್ದ. ಚೀಲದಲ್ಲಿ ಸಣ್ಣ ಚಾಕು ಮತ್ತು ತಂಬಾಕು ಕೊಳವೆಗಳೂ ಇದ್ದವು. ಒಂದು ಮೈಲಿದೂರವಿದ್ದ ಹುಲ್ಲುಗಾವಲಿಗೆ ಹಸುಗಳನ್ನು ಒಂದು ಕೋಲಿನಿಂದ ದೂಡುತ್ತ ಹೊಡೆದುಕೊಂಡು ಹೋದ.

ಹುಲ್ಲುಗಾವಲು ವಿಶಾಲವಾಗಿತ್ತು, ಬಗೆಬಗೆಯ ಗಿಡಮರಗಳಿಂದ ಮತ್ತು ಪೊದೆಗಳಿಂದ ತುಂಬಿತ್ತು. ನಾವು ಹೇಳುತ್ತಿರುವ ಸಮಯದಲ್ಲಿ ಬರವಿತ್ತು, ಎಲ್ಲ ಒಣಗಿ ಹೋಗಿ ಹಸುಗಳಿಗೆ ಸ್ವಲ್ಪಸ್ವಲ್ಪ ಕಚ್ಚಿ ತಿನ್ನಲು ಒಂದಿಷ್ಟು ಎಲೆಗಳಲ್ಲದೆ ಬೇರೇನೂ ಉಳಿದಿರಲಿಲ್ಲ.

ಸುಂದರನಿಗೆ ಹಸುಗಳನ್ನು ಹೊಡೆದುಕೊಂಡು ಹೋಗಲು ಹೆಚ್ಚಾಗಿ ಹೇಳುತ್ತಿರಲಿಲ್ಲ. ಮಳೆ ಬಂದರೆ ಕೊಟ್ಟಿಗೆಯಲ್ಲಿ ಉಳಿಯುತ್ತಿದ್ದವು. ಒಳ್ಳೆ ಬೆಳೆ ಬಂದರೆ ಅವನಿಗೆ ಕೆಲಸವಿರುತ್ತಿರಲಿಲ್ಲ, ಏಕೆಂದರೆ ದನಗಳು ಬತ್ತದ ಮಂಡುಗಳನ್ನು ತಾವೇ ತಿನ್ನುತ್ತಿದ್ದವು. ಬೇಸಿಗೆಯಲ್ಲಿ ದನಗಳಿಗೆ ಹೆಚ್ಚು ಆಹಾರ ಇರುತ್ತಿರಲಿಲ್ಲ, ಆದ್ದರಿಂದ ಅವನ್ನು ಹುಲ್ಲುಗಾವಲಿಗೆ ಹೊಡೆದುಕೊಂಡು ಹೋಗುವಂತೆ ಸುಂದರನಿಗೆ ಹೇಳುತ್ತಿದ್ದರು. ಇದು ಹದಿನೈದು ದಿನಗಳನ್ನು ಮೀರುತ್ತಿದ್ದುದು ವಿರಳ. ಆದರೆ ಈ ದಿನಗಳಲ್ಲಿ ಅವನಿಗೆ ಆ ದನಗಳಲ್ಲಿ ನಿಜವಾಗಿ ಪ್ರೀತಿ ಬರುತ್ತಿತ್ತು.

ಹುಲ್ಲುಗಾವಲಿನ ಪಕ್ಕದಲ್ಲಿ ಮರಗಳಿಂದ ತುಂಬಿಹೋದ ಒಂದು ಸಮೃದ್ಧವಾದ ಕಾಡು ಇತ್ತು, ಆ ಕಾಡಿನಲ್ಲಿ ಬಗೆಬಗೆಯ ಪ್ರಾಣಿಗಳು, ನರಿಗಳು, ಕೋತಿಗಳು, ಮುಳ್ಳು ಹಂದಿಗಳು, ಮೊಲಗಳು, ಕಾಡು ಹಂದಿಗಳು, ಜಿಂಕೆಗಳು ಎಲ್ಲ ಇದ್ದವು. ಒಮ್ಮೊಮ್ಮೆ ಆನೆಗಳೂ ಕಾಣಿಸಿಕೊಳ್ಳುತ್ತಿದ್ದವು. ಆದರೆ ಕಾಡು ಸರ್ಕಾರಕ್ಕೆ ಸೇರಿತ್ತು, ಅಲ್ಲಿ ದನಕರುಗಳನ್ನು ಮೇಯಿಸುವಂತಿರಲಿಲ್ಲ.

ಅವತ್ತು ಬೆಳಿಗ್ಗೆ ಸುಂದರ ಹಸುಗಳನ್ನು ಈ ನಿಷೇಧಿತ ಪ್ರದೇಶಕ್ಕೆ ಹೋಗಲು ಬಿಟ್ಟುಬಿಟ್ಟ. ತಾನೊಂದು ಗೇರು ಹಣ್ಣಿನ ಮರವನ್ನು ಹತ್ತಿ ಒಂದಿಷ್ಟು ಬೀಜಗಳನ್ನು ತಿಂದ. ಪಕ್ಷಿಗಳ ಕೂಗನ್ನು ಅನುಕರಿಸಿದ, ಹಸುಗಳಿಗೆ ಹೂವಿನ ಹಾರಗಳನ್ನು ಮಾಡಿದ. ಹಸುಗಳು ಕಾಡಿನತ್ತ ಹೋದಾಗ ತನ್ನ ಕೊಳಲನ್ನು ನುಡಿಸಿ ಅವನ್ನು ಹಿಂದಕ್ಕೆ ಕರೆದ. ಅವುಗಳ ಮೈಯನ್ನು ಸವರಿ, ಕಾಡಿನಲ್ಲಿ ದಾರಿ ತಪ್ಪಬಾರದೆಂದು ಮೃದುವಾಗಿ ಎಚ್ಚರಿಕೆ ಹೇಳಿದ. ಒಂದು ತೆಳುವಾದ ಜೊಂಡನ್ನು ಕತ್ತರಿಸಿ ಅದರ ಖಾಲಿಕೊಳವೆಯಲ್ಲಿ ಒಂದು ಬೀಜವನ್ನಿಟ್ಟು, ಅವನು ಒಂದು ಕೊನೆಯಲ್ಲಿ ಊದಿದರೆ ಬೀಜವು ಮತ್ತೊಂದು ಕೊನೆಯಿಂದ, ಬಂದೂಕಿನಿಂದ ಗುಂಡು ಹಾರಿದಂತೆ ಹಾರುತ್ತಿತ್ತು. ಅವನು ಅದನ್ನು ಹಲ್ಲಿಗಳನ್ನು ಮತ್ತು ಅಳಿಲುಗಳನ್ನು ಹೊಡೆಯಲು ಬಳಸಿದ. ಮರಗಳ ಮೇಲೆ ಹತ್ತಿ ಪಕ್ಷಿಗಳ ಗೂಡುಗಳಲ್ಲಿ ಇಣಿಕಿ ನೋಡಿದ, ಎಲೆಗಳಿಗೆ ಮುಳ್ಳುಗಳನ್ನು ಚುಚ್ಚಿ ಟೋಪಿಗಳನ್ನು ಮಾಡಿದ. ಒಮ್ಮೊಮ್ಮೆ ಅವನು ತಾನು ದೇವಾಲಯದಲ್ಲಿ ನೋಡಿದ್ದ ಗರುಡನೃತ್ಯವನ್ನು ಕುಣಿದ.

ಹುಲ್ಲುಗಾವಲಿಗೂ ಕಾಡಿಗೂ ನಡುವೆ ಒಂದು ಹೊಳೆ. ಆದರಲ್ಲಿ ಹೆಚ್ಚು ನೀರಿರಲಿಲ್ಲ - ದನಗಳನ್ನು

ತೊಳೆಯಲು ಸಾಕಾಗುತ್ತಿರಲಿಲ್ಲ, ಅವು ಬಾಯಾರಿಕೆಯನ್ನು ತಣಿಸಿಕೊಳ್ಳುವಷ್ಟು, ಅವನು ತನ್ನ ಅನ್ನ ಮರಗೆಣಸಿನ ಹುಳಿಗಳ ಊಟ ಮುಗಿಸಿ ಕುಡಿಯುವಷ್ಟು ನೀರು ಮಾತ್ರ ಇತ್ತು.

ಮಧ್ಯಾಹ್ನ ಹಸುಗಳು ನೆರಳಿನಲ್ಲಿ ಮಲಗಿ ಮೆಲುಕು ಹಾಕುತ್ತಿದ್ದಾಗ ಸುಂದರ ಒಂದು ಬಂಡೆಯ ನೆರಳಿನಲ್ಲಿ ಮಲಗಿದ್ದ, ಕೋತಿಯೊಂದು ಹತ್ತಿರ ಬಂತು. ಅವನು ತನ್ನ ಜೊಂಡಿನಿಂದ ಕಲ್ಲನ್ನು ಹೊಡೆದು ಅದನ್ನು ಓಡಿಸಿದ. ಅವನಿಗೆ ತುಂಬಾ ನಿದ್ದೆ ಕಣ್ಣಾಯಿತು, ಅವನು ಎಲೆಗಳ ಜಮಖಾನೆಯ ಮೇಲೆ ಮಲಗಿ, ರಾತ್ರಿ ನಿದ್ರೆ ಬಾರದಿದ್ದುದಕ್ಕೆ ಬದಲಾಗಿ ಈಗ ನಿದ್ರೆಹೋದ.

ಅವನ ಹತ್ತಿರವೇ ನರಿಗಳ ಗುಂಪೊಂದು ಊಳಿಟ್ಟುದುದರಿಂದ ಸುಂದರನ ಗಾಢ ನಿದ್ರೆಗೆ ಭಂಗ ಬಂದಿತು. ಬೆಚ್ಚಿ ಬಿದ್ದು ಎದ್ದ. ರಾತ್ರಿಯಾಗಿ ಬಿಟ್ಟಿತ್ತು. ಕಗ್ಗತ್ತಲು. ಅವನ ಮೂರು ಹಸುಗಳೂ ಕಾಣಲಿಲ್ಲ, ಪ್ರಾಯಶಃ ನರಿಗಳು ಅವನ್ನು ಹೆದರಿಸಿ ಓಡಿಸಿ ಬಿಟ್ಟಿರಬೇಕು, ಅಥವಾ ನರಿಗಳು ಅವನ್ನು ತುಂಡುಮಾಡಿಬಿಟ್ಟಿದ್ದವೋ? ನರಿಗಳು ಅವುಗಳ ಕಿವಿಗಳನ್ನೂ ಕೆಚ್ಚಲನ್ನೂ ತಿಂದು ಹಾಕಿ ಅವು ಸಾಯಲು ಬಿಟ್ಟುಬಿಟ್ಟಿದ್ದವೊ? ನರಿಗಳಿಗೆ ಎಷ್ಟೋ ಬಾರಿ ಹುಚ್ಚುನಾಯಿ ರೋಗ ಬರುತ್ತಿತ್ತು. ನರಿಗಳು ಕಚ್ಚಿದ ನಾಯಿಗಳಿಗೆ ಹುಚ್ಚು ಹಿಡಿಯುತ್ತಿತ್ತು. ಹಸುಗಳಿಗೂ ಹಾಗೇ ಆಗಬಹುದು. ಹುಚ್ಚು ಹಿಡಿದ ಹಸುವನ್ನು ಮುಟ್ಟಿದವರಿಗೂ ಹುಚ್ಚು ಹಿಡಿಯುತ್ತೆ ಅಂತ ಹೇಳ್ತಾರೆ. ಅಥವಾ ಹಸುಗಳು ಕಾಡಿನೊಳಕ್ಕೆ ಓಡಿ ಯಾವುದಾದರೂ ಹುಲಿ ಅವನ್ನ ತಿಂದು ಹಾಕಿ ಬಿಟ್ಟಿತ್ತೊ? ದೊಡ್ಡವರಿಗೆ ಅವನು ಮುಖ ತೋರಿಸುವುದು ಹೇಗೆ? ನರಿಗಳು ಅವನ ಮೇಲೂ ಬೀಳಬಹುದೊ?

ಸುಂದರನಿಗೆ ಭಯವಾಯಿತು. ಆದರೆ ಅವನು ದಿಕ್ಕುಗೆಡಲಿಲ್ಲ. ಸದ್ದಿಲ್ಲದೆ ಬಂಡೆಯ ಇನ್ನೊಂದು ಪಾರ್ಶ್ವದಿಂದ ಜಾರಿ ಇಳಿದ, ಕೈಕಾಲುಗಳನ್ನು ಬಳಸಿ ನೆಲವನ್ನು ಮುಟ್ಟಿ ತಡಕಿದ, ಮೂರು ಕಲ್ಲುಗಳು ಸಿಕ್ಕವು, ಅವನ್ನು ಚೀಲದೊಳಕ್ಕೆ ಹಾಕಿಕೊಂಡ. ಮೆಲ್ಲಕ್ಕೆ ಬಂಡೆಯ ಮೇಲಕ್ಕೆ ಹತ್ತಿ ಮೂರರಲ್ಲಿ ಅತ್ಯಂತ ದೊಡ್ಡ ಕಲ್ಲನ್ನು ನರಿಗಳ ಕಡೆಗೆ ಎಸೆದ. ಕಲ್ಲು ಗುರಿ ಮುಟ್ಟಿತು, ಏಕೆಂದರೆ ಥಡ್ ಎಂದು ಶಬ್ದ ಕೇಳಿಸಿತು, ಒಂದು ನರಿ ನೋವಿನಿಂದ ಅರಚಿಕೊಂಡಿತು. ತನ್ನ ಜೊಂಡಿನ ಬಂದೂಕಿನಿಂದ ಇನ್ನೆರಡು ಕಲ್ಲುಗಳನ್ನೂ ಹೊಡೆದ, ಮತ್ತೆ ಗುರಿ ತಾಕಿತು. ನರಿಗಳು ಓಡಿಹೋಗಿ ದೂರದಲ್ಲಿ ಅರಚಿಕೊಳ್ಳಲು ಪ್ರಾರಂಭಿಸಿದವು.

ಸುಂದರ ಶಬ್ದವಿಲ್ಲದೆ ಬಂಡೆಯಿಂದ ಇಳಿದ. ಅವನಿನ್ನೂ ಐದಾರು ಹೆಜ್ಜೆ ಇಟ್ಟಿರಲಿಲ್ಲ, ಅವನ ಪಾದಗಳು ಒಂದು ಮರದ ಬೇರುಗಳಲ್ಲಿ ಸಿಕ್ಕಿಕೊಂಡವು. ಅದರ ಕಾಂಡವನ್ನು ಕೈಯಲ್ಲಿ ತಡಕಿ ನೋಡಿದ, ಬಲವಾದ ಬಳ್ಳಿಯೊಂದು ಮರದ ಸುತ್ತ ಸುತ್ತಿಕೊಂಡಿದ್ದುದು ಗೊತ್ತಾಯಿತು. ಅದರಿಂದ ರೆಂಬೆಯೊಂದಕ್ಕೆ ಏರಿದ, ತಾನೀಗ ಸುರಕ್ಷಿತನಾಗಿದ್ದೇನೆ ಎನ್ನಿಸಿತು. ಇದ್ದಕ್ಕಿದ್ದಂತೆ ನೈಟ್ ಜಾರ್ ಹಕ್ಕಿ (ಅಲ್ಲಿನ ಜನ ಅದನ್ನು ಸಾವಿನ ಹಕ್ಕಿ ಎಂದು ಕರೆಯುತ್ತಿದ್ದರು) "ಅವನನ್ನ ಸುಟ್ಟು ಬಿಡಿ! ಅವನನ್ನು ಸುಟ್ಟು ಬಿಡಿ!" ಎಂದು ಕೂಗಿತು. ಇದರಿಂದ ಅವನಿಗೆ ಇನ್ನೂ ಗಾಬರಿಯಾಯಿತು. ದೇವರಿದ್ದಾನೆ ಸಹಾಯ ಮಾಡುತ್ತಾನೆ ಎಂದು ಧೈರ್ಯವನ್ನು ತಂದುಕೊಂಡ. ಚೌತಿಯ ಚಂದ್ರನ ಅಲ್ಪ ಬೆಳಕು ಬಿದ್ದಿತು, ಅವನಿಗೆ ಇನ್ನಷ್ಟು ಸ್ಪಷ್ಟವಾಗಿ ನೋಡುವುದು ಸಾಧ್ಯವಾಯಿತು. ಮರದ ಕಾಂಡಕ್ಕೆ ಕೋತಿಯ ಆಕೃತಿಯ ಪ್ರಾಣಿಯೊಂದು ಒರಗಿಕುಳಿತಿದ್ದು ಕಂಡಿತು. ಅವನು ಸದ್ದಿಲ್ಲದೆ ರೆಂಬೆಗಳ ಮೇಲೆ ಸಾಗಿದ, ಸರಿಯಾಗಿ ಕೋತಿಯ ನೆತ್ತಿಯ ಮೇಲೆ ಬಂದಾಗ ತನ್ನ ಚೀಲದ ಎಲ್ಲ ಕಲ್ಲುಗಳನ್ನೂ ಅದರ ತಲೆಯ ಮೇಲೆ ಸುರಿದ. ಕೋತಿ ಕಿರುಚಿಕೊಂಡು ಓಡಿತು. ಇತರ ರೆಂಬೆಗಳ ಮೇಲೆ ಕುಳಿತಿದ್ದ ಅದರ ಗೆಳೆಯ ಕೋತಿಗಳೂ ಕಿರುಚಿಕೊಂಡು ಮರದಿಂದ ಸರಸರ ಇಳಿದವು. ತಪ್ಪಿಸಿಕೊಳ್ಳಲು ಸುಂದರನಿಗೆ ಇದೇ ಅವಕಾಶ. ಅವನು ಮರದ ಬುಡಕ್ಕೆ ಜಾರಿದ, ಚಾಕುವನ್ನು ಉಪಯೋಗಿಸಿ ದೊಡ್ಡ ಕೋಲನ್ನು ಕತ್ತರಿಸಿಕೊಂಡ, ಜೊಂಡಿನ ನಡುವೆ ದಾರಿ ಮಾಡಿಕೊಳ್ಳಲು ಅದನ್ನು ಬಳಸಿದ. ಮತ್ತೆ ಬಂಡೆಗೆ ದಾರಿ ಮಾಡಿಕೊಂಡ, ಅದನ್ನು ಲಗುಬಗೆಯಿಂದ ಹತ್ತಿದ, ಸ್ವಲ್ಪ ವಿಶ್ರಾಂತಿ ಪಡೆಯಲು ಮಲಗಿಕೊಂಡ. ಈ ಹೊತ್ತಿಗೆ ಚೌತಿಚಂದ್ರ ಮರೆಯಾಗಿದ್ದ, ಆಕಾಶದಲ್ಲಿ ಕೆಲವೇ ನಕ್ಷತ್ರಗಳು ಮಿನುಗುತ್ತಿದ್ದವು.

ಸುಂದರ ತನ್ನ ಹಸುಗಳನ್ನೇ ಕುರಿತು ಯೋಚನೆ ಮಾಡುತ್ತಿದ್ದ. ಆ ಬಡಪ್ರಾಣಿಗಳು ಕತ್ತಲಲ್ಲಿ ದಿಕ್ಕುಗೆಟ್ಟಿರಬೇಕು. ತೀರ ಸಹಾಯವಿಲ್ಲದ ಪ್ರಾಣಿಗಳು. ಅವುಗಳ ಭೀತಿ, ಯಾತನೆ ಅವನ ಭೀತಿ, ಯಾತನೆಗಳಿಗಿಂತ ಬಹು ಹೆಚ್ಚಾಗಿದ್ದಿರಬೇಕು. ಅವನೇನೊ ತನ್ನ ಕೊಳಲನ್ನು ನುಡಿಸಿದ, ಆದರೆ ನರಿಗಳು ಊಳಿಟ್ಟ ಸದ್ದಿನಲ್ಲಿ ಅದರ ನಾದ ಮುಳುಗಿ ಹೋಗಿತ್ತು.

ಹಸಿವು, ಬಾಯಾರಿಕೆ ಅವನನ್ನು ಪೀಡಿಸುತ್ತಿದ್ದವು. ಒಂದಿಷ್ಟು ಹಣ್ಣುಗಳನ್ನು ಕಿತ್ತುಕೊಳ್ಳಲು ಸಾಧ್ಯವಾಗಿದ್ದರೆ! ಆದರೆ ಕತ್ತಲಲ್ಲಿ ಏನೂ ಕಾಣುತ್ತಿರಲಿಲ್ಲ.

ಅವನಿಗೊಂದು ದೀಪ ಕಂಡಿತು. ಅವರೇನು ಮನುಷ್ಯರೋ ದುಷ್ಟ ಚೇತನಗಳೋ? ಸುಂದರನ ಮೈಯೆಲ್ಲ ತಣ್ಣಗೆ ಬೆವರಿತು.

ದೀಪದ ಬೆಳಕು ಬಹಳ ಕ್ಷೀಣವಾಗಿತ್ತು. ಥಟ್ಟನೆ ಶಬ್ದಕೇಳಿ ಮೌನ ಮುರಿಯಿತು. ಸುಂದರ ಆಲಿಸಿ ಕೇಳಿದ. ಅದೇನೂ ಮರಗಳನ್ನು ಕಡಿದು ಬೀಳಿಸುವ ಶಬ್ದವಾಗಿರಲಿಲ್ಲ.

ಇದ್ದ ಧೈರ್ಯವನ್ನೆಲ್ಲ ತುಂಬಿಕೊಂಡು ಸುಂದರ ಅಂಬೆಗಾಲಿಡುತ್ತ ಬಂಡೆಯಿಂದ ಮತ್ತೆ ಇಳಿದು ದೀಪದತ್ತ ಹೋದ.

ನಾಲ್ಕೈದು ಜನ ಒಂದು ಸತ್ತ ಪ್ರಾಣಿಯ ಚರ್ಮ ತೆಗೆಯುತ್ತಿದ್ದುದು ಅವನಿಗೆ ಕಂಡಿತು. ಅದು ಅವನ ಹಸು, ಚುಕ್ಕೆಗಳ ಬಾಲವಿದ್ದ ಅವನ ಹಸು, ನಾಲ್ಕೆ ತಿಂಗಳ ಕೆಳಗೆ ಮರಿ ಹಾಕಿತ್ತು. ಏನಾಗುತ್ತಿತ್ತೆಂದು ನೋಡಲು ಸುಂದರ ಸದ್ದಿಲ್ಲದೆ ಒಂದು ಮರದ ಹಿಂದೆ ಅವಿತುಕೊಂಡ. ಆ ಜನರಿಗೆ ಇದ್ದ ದೀಪ ಎಂದರೆ ಒಂದು ಸೀಸೆಯ ತುಂಬ ಮಿಂಚಿನ ಹುಳುಗಳು. ಹಸುವಿನ ತಲೆಯನ್ನು ಕತ್ತರಿಸಿದ್ದುದನ್ನು ಕಂಡ, ಅದು ತನ್ನ ಚುಕ್ಕೆ ಬಾಲವಲ್ಲ, ಒಂದು ಮುದಿಯಾದ ಬಿಳಿಯ ಗೂಳಿ ಎಂದು ಗೊತ್ತಾಯಿತು. ಸಮಾಧಾನದಿಂದ ನಿಟ್ಟುಸಿರು ಬಿಟ್ಟ. ಇದು ತಿಳಿದಿದ್ದರಿಂದ ಅವನಿಗೆ ಧೈರ್ಯವೂ ಬಂದಿತು. ಅವನೀಗ ಮಾಡಬೇಕಾದದ್ದು ಒಂದೇ ಕೆಲಸ. ಮಿಂಚಿನ ಹುಳುಗಳಿದ್ದ ಸೀಸೆಯನ್ನು ಕದಿಯುವುದು. ಕಳ್ಳರು ಅದಕ್ಕೆ ಚೀಲಹೊದ್ದಿಸಿದ್ದರು, ತಮಗೆ ಅಗತ್ಯವಾದ ಒಂದು ಪಾರ್ಶ್ವವನ್ನು ತೆರೆದಿಡುತ್ತಿದ್ದರು. ಅವರು ತಮ್ಮ ನೀಚ ಕಾರ್ಯದಲ್ಲಿ ಮಗ್ನರಾಗಿದ್ದಾಗ ಸುಂದರ ಸದ್ದಿಲ್ಲದೆ ಗೋಣಿ ಚೀಲ ಮುಚ್ಚಿದ್ದ ಸೀಸೆಯನ್ನು ಎತ್ತಿಕೊಂಡು ಮತ್ತೆ ಮರಕ್ಕೆ ಹೋದ.

ಗುಂಪಿನಲ್ಲಿ ಒಬ್ಬ "ಒಂದಿಷ್ಟು ಬೆಳಕು ತೋರಿಸಿ" ಎಂದು ಕೂಗಿದುದು ಅವನಿಗೆ ಕೇಳಿತು.

ಕಲ್ಲಿನ ಮೇಲೆ ಇಟ್ಟಿದ್ದ ಸೀಸೆಯನ್ನು ತೆಗೆದುಕೊಳ್ಳಲು ಮತ್ತೊಬ್ಬ ತಿರುಗಿದ. ಅದು ಅಲ್ಲಿರಲಿಲ್ಲ. ಸೀಸೆ ಎಲ್ಲಿ ಹೋಯಿತು? ವಾದ ಮಾಡುತ್ತ ಜಗಳವಾಡಲು ಅವರು ಪ್ರಾರಂಭಿಸಿದರು.

"ಇಲ್ಲೇ ಬಿಟ್ಟಿದ್ದೆ ಅದನ್ನ, ನನಗೆ ಖಂಡಿತ."

"ಎಚ್ಚರಿಕೆಯಿಂದ ನೋಡು! ಅಲ್ಲೇ ಇರಬೇಕು."

"ಕಲ್ಲಿನ ಮೇಲೆ ಇಟ್ಟೆ, ನನಗೆ ಖಂಡಿತವಾಗಿ ಗೊತ್ತು."

"ಯಾರೋ ನಮ್ಮನ್ನ ನೋಡಿಬಿಟ್ಟಿದ್ದಾರೆ, ಅನುಮಾನವೇ ಇಲ್ಲ. ಈ ಕೆಲಸ ಮಾಡುತ್ತಿರುವಾಗಲೇ ಸಿಕ್ಕಿಹಾಕಿಕೊಂಡುಬಿಡ್ತೇವೆ. ತಪ್ಪಿಸಿಕೊಳ್ಳೋಣ."

ಕೈಗೆ ಸಿಕ್ಕಷ್ಟು ಮಾಂಸವನ್ನು ತೆಗೆದುಕೊಂಡು ಓಡಿಹೋಗಲು ಅವರು ತೀರ್ಮಾನಿಸಿದರು. ಹೆಣವನ್ನು ಮನಸ್ವೀ ಬಡಿಯಲು ಪ್ರಾರಂಭಿಸಿದರು. ಕತ್ತಲಲ್ಲಿ ಒಂದು ಜೊಂಡು ಕೊಳಲಿನ ನಾದ ತೇಲಿಬಂದಾಗ ಅವರು ನಿಶ್ಚಲರಾದರು. ತಮ್ಮ ಚಾಕುಗಳನ್ನು ಎಸೆದು ಒಂದು ಮರವನ್ನು ಹತ್ತಲು ಓಡಿದರು.

ಪಿಳ್ಳಂಗೋವಿಯ ಸ್ವರವನ್ನು ನರಿಯೊಂದು ಕೇಳಿತು. ಅದು ತಲೆಯನ್ನೆತ್ತಿ ಊಳಿಡಲು ಪ್ರಾರಂಭಿಸಿತು. ಇತರ ನರಿಗಳೂ ಒಟ್ಟಿಗೆ ಕೂಗಲು ಪ್ರಾರಂಭಿಸಿದವು. ಅವಕ್ಕೆ ಮಾಂಸದ ವಾಸನೆ ಬಂದಿತು, ಓಡುತ್ತೋಡುತ್ತ ಗೂಳಿಯ ಹೆಣದ ಹತ್ತಿರ ಬಂದು ಅದರ ಮೇಲೆ ಬಿದ್ದವು. ಕಳ್ಳರ ತಂಡವು ಮರಗಳ ಮೇಲಿಂದ, ತಾವು ಕೊಂದುಹಾಕಿದ ಗೂಳಿಯನ್ನು ನರಿಗಳು ತಿನ್ನುವುದನ್ನು ಖೇದದಿಂದ, ಏನು ಮಾಡಲೂ ತೋರದೆ, ನೋಡುತ್ತಿದ್ದರು.

ಈ ಹೊತ್ತಿಗೆ ಸುಂದರ ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡಿದ್ದ ಅವನ ಕಣ್ಣು ಕತ್ತಲೆಗೆ ಹೊಂದಿಕೊಂಡಿತ್ತು. ತನ್ನ ಹಸುಗಳನ್ನು ಕರೆಯುತ್ತ ಪಿಳ್ಳಂಗೋವಿಯನ್ನು ನುಡಿಸಲು ಪ್ರಾರಂಭಿಸಿದ.

ಕಾಡಿನ ಪ್ರಾಣಿ ಪಕ್ಷಿಗಳಿಗೆ ತಳಮಳವಾದಂತೆ ಕಂಡಿತು. ಪಕ್ಷಿಗಳು ಚಿಲಿಪಿಲಿಗುಟ್ಟಿದವು. ಸಣ್ಣ ಪ್ರಾಣಿಗಳು ದೌಡಾಯಿಸುತ್ತ ಅವನನ್ನು ದಾಟಿದವು; ಜಿಂಕೆಗಳ ಆತಂಕದ ಕರ್ಕಶ ಶಬ್ದದಿಂದ ಗಾಳಿ ತುಂಬಿಹೋಯಿತು. ಆದರೆ ಅವನ ಹಸುಗಳ ಸುಳಿವೇ ಇಲ್ಲ.

ಭಯದಿಂದ ಅವನ ಕಾಲುಗಳು ಚುರುಕಾದವು, ಅವನು ಓಟ ಓಡಲು ಪ್ರಾರಂಭಿಸಿದ. ಮುಳ್ಳುಗಳು ಅವನ ಕೈಕಾಲುಗಳನ್ನೆಲ್ಲ ತರಚಿಬಿಟ್ಟವು. ಇದ್ದಕ್ಕಿದ್ದಂತೆ ಅವನು ಮರವೊಂದರ ಬೇರನ್ನು ಎಡವಿ ನೆಲದ ಮೇಲೆ ಬಿದ್ದುಬಿಟ್ಟ. ಅದೃಷ್ಟ ಚೆನ್ನಾಗಿತ್ತು, ಮಿಂಚಿನ ಹುಳುಗಳಿದ್ದ ಸೀಸೆ ಒಡೆಯಲಿಲ್ಲ. ಅದರ ಕ್ಷೀಣ ಬೆಳಕಿನಲ್ಲಿ, ತನ್ನ ಮೊಳಕಾಲಿನ ಕೆಳಗೆ ಆಳವಾದ ಗಾಯವಾಗಿ ವಿಪರೀತ ರಕ್ತ ಬರುತ್ತಿದ್ದುದು ಕಂಡಿತು. ರಕ್ತ ಬರುವುದನ್ನು ತಡೆಯಲು ಗಾಯಕ್ಕಿಂತ ಸ್ವಲ್ಪ ಮೇಲೆ ಚೀಲದ ದಾರವನ್ನು ಕಟ್ಟಿದ. ವಿಪರೀತ ನೋವಾಗುತ್ತಿತ್ತು , ನಿಂತುಕೊಳ್ಳಲೂ ಆಗುತ್ತಿರಲಿಲ್ಲ.

ತನ್ನ ರಕ್ತದ ವಾಸನೆಯು ಯಾವುದಾದರೂ ಕಾಡು ಪ್ರಾಣಿಯನ್ನು ಆಕರ್ಷಿಸಬಹುದು, ಅದು ತನ್ನನ್ನು ಜೀವಸಹಿತವೇ ತಿಂದುಹಾಕಿಬಿಡುತ್ತದೆ ಎಂದು ಸುಂದರನಿಗೆ ವಿಪರೀತ ಹೆದರಿಕೆಯಾಯಿತು. ಅಥವಾ ಇರುವೆಗಳು ಸೇರಿಕೊಂಡು ಅವನನ್ನು ತಿಂದುಹಾಕಿಬಿಡಬಹುದು! ಎಷ್ಟು ಭಯಂಕರ!

ಒಂದು ಔಷಧದ ಗಿಡದ ಎಲೆಗಳನ್ನು ತೆಗೆದುಕೊಂಡು ಗಾಯಗಳನ್ನು ಸ್ವಚ್ಛಮಾಡಿದ; ತನ್ನಲ್ಲಿ ಉಳಿದಿದ್ದ ಅಲ್ಪ ಬಲವನ್ನೂ ಬಳಸಿ ಚುಕ್ಕಿಬಾಲವನ್ನು ಕೂಗಿ ಕರೆದ. ಆದರೆ ಅವನ ಕೂಗು ಕ್ಷೀಣವಾದ ಪಿಸುಮಾತಿಗಿಂತ ಗಟ್ಟಿ ಇರಲಿಲ್ಲ. ಸಂಪೂರ್ಣವಾಗಿ ಬಳಲಿಸೋತು ಸುಂದರ ಇದ್ದ ಕಡೆಯೇ ನಿದ್ರೆ ಹೋಗಿಬಿಟ್ಟ.

* * *

ನಡೆದಿದ್ದುದು ಸರಳ ಸಂಗತಿ. ಹಸುಗಳು ತೃಪ್ತಿಯಾಗಿ ಮೆಯ್ದಿದ್ದವು, ಮೆಲುಕು ಹಾಕಿದ್ದವು. ಅನಂತರ ಮನೆಗೆ ಹೋಗುವ ಹೊತ್ತಾಯಿತೆಂದು ಸುಂದರನಿಗೆ ಕೂಗಿ ಹೇಳಿದ್ದವು. ಅವು ಕೂಗುತ್ತಿದ್ದರೂ ಸುಂದರ ನಿದ್ರೆ ಮಾಡುತ್ತಿದ್ದ. ಚುಕ್ಕೆ ಬಾಲ ಅವನ ಕಾಲನ್ನು ನೆಕ್ಕಿದಾಗ ಬಲವಾಗಿ ಒದ್ದು ಅದಕ್ಕೆ ಬಹುಮಾನ ನೀಡಿದ್ದ. ಸುಂದರನಿಲ್ಲದೆಯೇ ಹಸುಗಳು ಹಳ್ಳಿಗೆ ಹೋದವು. ಅವನ್ನು ಕೊಟ್ಟಿಗೆಯಲ್ಲಿ ಕಟ್ಟಿಬಿಟ್ಟರು.

ಕತ್ತಲಾದರೂ ಸುಂದರ ಮನೆಗೆ ಹಿಂದಿರುಗದಿದ್ದಾಗ ಅವನ ತಂದೆ ಅವನನ್ನು ಹುಡುಕಿಕೊಂಡು ಹೊರಟ. ಹಸುಗಳು ಹಿಂದಕ್ಕೆ ಬಂದಿದ್ದವು ಎಂದು ಕೇಳಿದಾಗ ಅವನು ಸುಂದರನು ದೇವಸ್ಥಾನದಲ್ಲಿ ಹಬ್ಬದ ಪೂಜೆ ನೋಡಲು ಹೋಗಿರಬೇಕು ಎಂದುಕೊಂಡು ಮನೆಗೆ ಹಿಂದಿರುಗಿದ.

ಮರುದಿನ ಚುಕ್ಕೆಬಾಲವು ಯಾರೂ ಹಾಲು ಕರೆಯಲು ಅವಕಾಶವನ್ನ ಕೊಡಲಿಲ್ಲ. ಅದು ಎಗರಾಡಿತು, ಹತ್ತಿರ ಯಾರು ಬಂದರೂ ಒದೆಯಿತು. ಹಳ್ಳಿಯ ಜನ ಅದಕ್ಕೆ ಕಾಯಿಲೆ ಎಂದುಕೊಂಡರು. ಪ್ರತಿಯೊಬ್ಬರೂ ತಾವು ಅರ್ಥಮಾಡಿಕೊಂಡಂತೆ ಕಾಯಿಲೆಯನ್ನು ಹೆಸರಿಸಿದರು.

"ಅದನ್ನ ಹಾವು ಕಚ್ಚಿಬಿಟ್ಟಿದೆ."

"ಕಾಡಿನಲ್ಲಿ ಯಾವುದೋ ವಿಷದ ಗಿಡವನ್ನ ಅದು ತಿಂದಿರಬೇಕು."

ಮನೆಯ ಯಜಮಾನಿಯು ಚುಕ್ಕೆಬಾಲಕ್ಕೆ ಪ್ರತಿನಿತ್ಯದಂತೆ ಹಿಂಡಿ ಮತ್ತು ಕಲಗಚ್ಚನ್ನು ಕೊಡದೆ ಗಂಜಿಗೆ ಉಪ್ಪುಹಾಕಿ ಕೊಡಬೇಕೆಂದು ಅಪ್ಪಣೆ ಮಾಡಿದಳು. ಅದರ ಹಾಲನ್ನು ಕರೆಯದೆ, ಅದರ ಕರುವನ್ನೂ ಉಪವಾಸ ಇಟ್ಟು ತಾಯಿಯನ್ನೂ ಕರುವನ್ನೂ ಬೇರೆಬೇರೆಯಾಗಿ ಕೊಟ್ಟಿಗೆಯಲ್ಲಿ ಕಟ್ಟ ಬೇಕೆಂದೂ ಆಜ್ಞೆ ಮಾಡಿದಳು.

ಸ್ವಲ್ಪ ಹೊತ್ತಿನ ನಂತರ ಉಪ್ಪು ಹಾಕಿದ ಗಂಜಿಯನ್ನು ತೆಗೆದುಕೊಂಡು ಆಕೆ ಕೊಟ್ಟಿಗೆಗೆ ಹೋದಳು. ಚುಕ್ಕೆಬಾಲ ಮಾಯವಾಗಿಬಿಟ್ಟಿತ್ತು.

ಯಜಮಾನಿಗೆ ತುಂಬಾ ತಳಮಳವಾಯಿತು, ಆಕೆ ಎಲ್ಲರ ಮೇಲೂ ರೇಗಲು ಪ್ರಾರಂಭಿಸಿದಳು.

"ಹಸುವನ್ನು ಕೊಟ್ಟಿಗೆಯಿಂದ ಹೊರಕ್ಕೆ ಬಿಡಬೇಡಿ ಅಂತ ನಾನು ಹೇಳಿರಲಿಲ್ಲವೆ! ನನ್ನ ಅಪ್ಪಣೆಗೆ ವಿರುದ್ಧವಾಗಿ ಆ ಹುಡುಗ ಸುಂದರ ಅದನ್ನೇಕೆ ಹೊಡೆದುಕೊಂಡು ಹೋದ?"

ಗೂಟಕ್ಕೆ ಕಟ್ಟಿದ್ದ ಹಗ್ಗದ ಕೊನೆ ಕಿತ್ತುಕೊಂಡಿದ್ದನ್ನು ಜನರು ಗಮನಿಸಿದರು. "ನೋಡಿ, ಹಸು ಕಿತ್ತುಕೊಂಡು ಹೋಗಿದೆ. ಬಹಳ ದೂರವೇನೂ ಹೋಗಿರಲು ಸಾಧ್ಯವಿಲ್ಲ"

ಚುಕ್ಕೆ ಬಾಲಕ್ಕಾಗಿ ಜನ ಎಲ್ಲ ಕಡೆ ಹುಡುಕಿದರು. ಹಸುವಿನ ಅಥವಾ ಅದನ್ನು ನೋಡಿಕೊಳ್ಳುವ ಸುಂದರನ ಸೂಚನೆಯೇ ಎಲ್ಲಿಯೂ ಕಾಣಲಿಲ್ಲ. ಅವರಿಬ್ಬರನ್ನೂ ಹುಡುಕಲು ಸುಂದರನ ತಂದೆ ಮತ್ತು ಚುಕ್ಕೆಬಾಲದ ಯಜಮಾನಿ ಕಾಡಿಗೆ ಹೊರಟರು. ಇತರರೂ ಹುಡುಕಾಟದಲ್ಲಿ ಅವರಿಗೆ ಜೊತೆಯಾದರು.

ಹಿಂದಿನ ರಾತ್ರಿ ನಿದ್ರೆ ಮಾಡುತ್ತಿದ್ದ ಸುಂದರನನ್ನು ಬಿಟ್ಟ ಸ್ಥಳಕ್ಕೆ ದಾರಿಯನ್ನು ಚುಕ್ಕೆ ಬಾಲ ಕಂಡುಕೊಂಡಿತು. ಅವನು ಅಲ್ಲಿರಲಿಲ್ಲ. ದಿಗ್ಭ್ರಮೆಯಾಗಿ ಚುಕ್ಕೆ ಬಾಲ ಅವನಿಗಾಗಿ ಹುಡುಕಲು ಪ್ರಾರಂಭಿಸಿತು. ಕೊಳೆಯಾಗಿ ಹರಿದು ಬಿದ್ದಿದ್ದ ಅವನ ಚೀಲ ಕಂಡಿತು. ಇನ್ನೂ ಹುಡುಕಿದ ಮೇಲೆ ಸುಂದರನೇ ಕಂಡ. ಮೈಯೆಲ್ಲ ಗಾಯವಾಗಿತ್ತು. ಆದರೆ ಅವನಿಗೆ ಗಾಢ ನಿದ್ರೆ. ಹಸುವು ಗಟ್ಟಿಯಾಗಿ ಕೂಗಿ ಅವನ ಮೈಯನ್ನೆಲ್ಲ ನೆಕ್ಕಲು ಪ್ರಾರಂಭಿಸಿತು; ಹುಡುಗನ ಗಾಯಕ್ಕೆ ಮುತ್ತಿದ್ದ ಇರುವೆಗಳನ್ನೂ ನೊಣಗಳನ್ನೂ ನೆಕ್ಕಿ ಓಡಿಸಿತು. ವಿಚಿತ್ರ ಸಂಗತಿ ಎಂದರೆ, ಹಸುವಿನ ಕೆಚ್ಚಲುಗಳು ಭಾರವಾಗಿ ಅವುಗಳಿಂದ ಹಾಲು ಹೊರಸೂಸಲು ಪ್ರಾರಂಭವಾಯಿತು. ಹಸುವು ಸುಂದರನಿಗೆ ಒದ್ದೆಯಾದ ಕೆಚ್ಚಲು ಸಿಕ್ಕುವಂತೆ ಅವನ ಮುಖದ ಹತ್ತಿರ ಮಲಗಿತು. ಹುಡುಗನು ಕರುವು ಕೆಚ್ಚಲಿಗೆ ಬಾಯಿ ಇಟ್ಟು ಹಾಲು ಕುಡಿಯುವಂತೆಯೇ ಹಾಲನ್ನು ಎಳೆದುಕೊಂಡ. ನಿಧಾನವಾಗಿ ಅವನ ಕೈಕಾಲುಗಳಿಗೆ ತ್ರಾಣ ಬಂದಿತು. ತನ್ನ ತಲೆಯನ್ನು ಹಸುವಿನ ಗಂಗೆದೊಗಲಿನ ಮೇಲಿಟ್ಟು ಅದರ ಮೈಗೆ ಅಂಟಿಕೊಂಡು ಮಲಗಿದ. ಹುಡುಕಿಕೊಂಡು ಬಂದ ಜನರ ತಂಡ ಗೋವು ಮತ್ತು ಗೋಪಾಲ, ಚುಕ್ಕೆಬಾಲ ಮತ್ತು ಸುಂದರನನ್ನು ಕಂಡದ್ದು ಹೀಗೆ.

# ಬಹುವೇಗದ ಫೆನೆ

ಬಿ. ಆರ್. ಭಾಗವತ್

ನಂದು ನವತೆ ವೊರ್ಲಿಯಲ್ಲಿ ವಾಸಿಸುತ್ತಿದ್ದ - ಅವನು ನಿಜವಾದ ಮುಂಬಯಿವಾಸಿ. ಆದರೆ ಬನೇಶ್ (ಉರುಫ್ ಬಹುವೇಗದ) ಫೆನೆ ಮುಂಬಯಿಯ ವಿದ್ಯಾಭವನದ ವಿದ್ಯಾರ್ಥಿ. ಅವನ ಧ್ಯೇಯವಾಕ್ಯ ಎಂದರೆ, ಜಗತ್ತೆಲ್ಲ ನನ್ನ ಮನೆಯೇ. ಸದಾ ಅಲೆಯುತ್ತಿರುವ ಬನೇಶ್ ಸ್ವಲ್ಪ ಹೆಚ್ಚು ಕಡಮೆ ತನ್ನ ಮನೆಯ ಹೊಸ್ತಿಲ ಮೇಲೇ ಭೇಟಿಯಾದದ್ದು ಆಶ್ಚರ್ಯ ಎನ್ನಿಸಿತು, ನಂದುಗೆ; ಆದರೆ ಭೇಟಿಯ ಅತ್ಯಂತ ವಿಲಕ್ಷಣ ಪರಿಣಾಮ ಆದದ್ದು ಬಹುವೇಗದ ಫೆನೆ ಮೇಲೆ - ಅದೂ ನಂದುವಿನಿಂದಾಗಿ.

'ಸ್ವಲ್ಪ ಹೆಚ್ಚು ಕಡಮೆ' ಎಂದು ನಾನು ಏಕೆ ಹೇಳಿದೆನೆಂದರೆ ವಾಸ್ತವವಾಗಿ ಬನೇಶನನ್ನು ನಂದು ಮನೆಗೆ ಆಹ್ವಾನಿಸಿರಲಿಲ್ಲ, ಅಷ್ಟೇಕೆ ಅವರಿಗೆ ಪರಿಚಯವೂ ಇರಲಿಲ್ಲ. ನಿಜ, ನಂದುಗೆ ಬಹುವೇಗದ ಫೆನೆಯ ವಿಷಯವೇನೋ ತಿಳಿದಿತ್ತು. ಅವನ ಧೈರ್ಯ, ಯೋಚನೆಯನ್ನು ಮಾಡದೆ ಇದ್ದಕ್ಕಿದ್ದಂತೆ ಮಾಡಿದ ಸಾಹಸದ ಕೆಲಸಗಳು ಇವುಗಳಿಂದ ಎಲ್ಲರಿಗೂ ಅವನ ವಿಷಯ ತಿಳಿದಿದ್ದಂತೆ ನಂದುಗೂ ತಿಳಿದಿತ್ತು. ಕಥೆಗಳನ್ನು ಕಟ್ಟುವುದರಲ್ಲಿ ನಂದು ನವತೆಯ ಸಾಮರ್ಥ್ಯದ ವಿಷಯ, ನಂಬುವುದಕ್ಕೆ ಸಾಧ್ಯವಿಲ್ಲದಂತಹ ಆ ಸಾಮರ್ಥ್ಯದ ವಿಷಯ ಬನೇಶನಿಗೆ ತಿಳಿದಿತ್ತು. ಏನೂ ಇಲ್ಲದೆಯೇ ಕಥೆಗಾರ ನಂದು ನವತೆ ಒಂದು ಇಡೀ ಪ್ರಪಂಚವನ್ನೆ ಸೃಷ್ಟಿಸಬಲ್ಲವನಾಗಿದ್ದ.

ಈ ಇಬ್ಬರು ಧೀರರು ಮೊಟ್ಟಮೊದಲು ಭೇಟಿಯಾದದ್ದು ನಂದುವಿನ ಮನೆಯ ಹತ್ತಿರವಿದ್ದ ಸೊಗಸಾದ ದೊಡ್ಡ ಮನೆಯ ಮಾಳಿಗೆಯ ಮೇಲೆ.

ಮಕ್ಕಳ ದೊಡ್ಡ ಗುಂಪೇ ಸೇರಿತ್ತು. ಪ್ರಸಿದ್ಧವಾದ ಖೋಕ ಔಷಧಿ ಕಂಪೆನಿ ಚಿತ್ರಬರೆಯುವ ಸ್ಪರ್ಧೆಯನ್ನು ಏರ್ಪಡಿಸಿತ್ತು. ಬಗೆಬಗೆಯ ಪ್ರಚಾರಗಳನ್ನೆಲ್ಲ ಗಂಟುಹಾಕಿ ಜಾಕ್ ಕೆಮ್ಮಿನ ಬಿಂದುಗಳನ್ನು ಜನಪ್ರಿಯ ಮಾಡಲು ಅವರು ಪ್ರಯತ್ನಿಸುತ್ತಿದ್ದರು. ಈಗ, ತಮ್ಮ ಪ್ರಯತ್ನಗಳ ಪರಮಾವಧಿಯಲ್ಲಿ ಅವರು ಗಂಟುಹಾಕಿದ್ದುದೆಂದರೆ ಲೆಖ್ಖವಿಲ್ಲದಷ್ಟು ಬೆಲೂನುಗಳನ್ನು!

ಅತ್ತಿತ್ತ ತೂಗಾಡುತ್ತಿದ್ದ ಬೆಲೂನ್‌ಗಳು ಬೆಟ್ಟದ ಕೆರೆಯಲ್ಲಿ ತೇಲುತ್ತಿರುವ ತಾವರೆಗಳಂತೆ ಕಾಣುತ್ತಿದ್ದವು. ನೂರಾರು ಬೆಲೂನ್‌ಗಳಿದ್ದವು ಅಲ್ಲಿ - ರಬ್ಬರ್ ಬೆಲೂನ್‌ಗಳು ಮತ್ತು ಪ್ಲಾಸ್ಟಿಕ್ ಬೆಲೂನ್‌ಗಳು. ಪದಗಳನ್ನೂ ಚಿತ್ರಗಳನ್ನೂ ಬರೆಯುವುದರಲ್ಲಿ ತಲ್ಲೀನರಾಗಿದ್ದ ಅನೇಕ ಹುಡುಗರು ಅವುಗಳ ಮುಂದೆ ಕುಳಿತಿದ್ದರು. ವಾಸ್ತವವಾಗಿ ಅವರು 'ಕುಳಿ'ತಿರಲಿಲ್ಲ, ಮೇಲಕ್ಕೆದ್ದು ಕೆಳಕ್ಕೆ ಇಳಿಯುತ್ತಿದ್ದ ಚಿತ್ರ ಬರೆಯುವ ಕ್ಯಾನ್‌ವಾಸ್ ಅಥವಾ ಪ್ಲ್ಯಾಸ್ಟಿಕ್ ಮೇಲೆ ತಮ್ಮ ಕಲಾಕೌಶಲ್ಯವನ್ನು ತೋರಿಸಲು ಅವರು ನಿಲ್ಲಬೇಕಾಗಿತ್ತು. ಹುಡುಗ ಹುಡುಗಿಯರ ಸಾಲುಸಾಲುಗಳಿದ್ದವು. ಒಂದು ಸಾಲು ಪಶ್ಚಿಮಕ್ಕೆ ಮುಖ ಮಾಡಿತ್ತು, ಒಂದು ಪೂರ್ವಕ್ಕೆ; ಆದುದರಿಂದ ಪಕ್ಕದವರಿಂದ ಕದ್ದು ಬರೆಯುವುದು ಸುಲಭವಾಗಿರಲಿಲ್ಲ

ಹುಡುಗರ ಮುಂದಿದ್ದ ಸವಾಲು ಇದು — ಬೆಲೂನಿನ ಮೇಲೆ ಒಂದು ಆಕರ್ಷಕ ಚಿತ್ರವನ್ನು ಚಿತ್ರಿಸಿ, ಹದಿನೈದಕ್ಕಿಂತ ಹೆಚ್ಚು ಪದಗಳನ್ನು ಬಳಸದೆ ಹೊಳಪಿನ ಕೆಂಪು ಬಣ್ಣದಲ್ಲಿ ಮನಸ್ಸನ್ನು ಸೆಳೆಯುವ ಒಂದು ಘೋಷಣೆಯನ್ನು ಬರೆಯುವುದು. ಘೋಷಣೆ ಜಾಕ್ ಕೆಮ್ಮಿನ ಬಿಂದುಗಳ ಪ್ರಶಂಸೆಯಾಗಿರಬೇಕಾಗಿತ್ತು. ತೀರ್ಪುಗಾರರು ಚಿತ್ರಗಳನ್ನು ಬರೆದ ಬೆಲೂನಿನಲ್ಲಿ ಅತ್ಯುತ್ತಮವಾದುದನ್ನು ಆರಿಸಿ ಗೆದ್ದ ಹುಡುಗ ಅಥವಾ

ಹುಡುಗಿಗೆ ಬಹುಮಾನ ಕೊಡುವರು; ಬಹುಮಾನ ಪಡೆದ ಚಿತ್ರವನ್ನೂ ಘೋಷಣೆಯನ್ನೂ ಬೃಹದಾಕಾರದ ಒಂದು ಬೆಲೂನಿನ ಮೇಲೆ ಬರೆದು ಆಕಾಶದಲ್ಲಿ ಹಾರಿ ಬಿಡುವರು.

ಇಡೀ ಮುಂಬಯಿ ಜಾಹಿರಾತನ್ನು ನೋಡಲಿತ್ತು - ಜಾಕ್ ಕೆಮ್ಮಿನ ಬಿಂದುಗಳ ಜಾಹೀರಾತು ಮತ್ತು ಗೆದ್ದವರ ಕೌಶಲ್ಯದ ಜಾಹೀರಾತು.

ಖೋಕ ಕಂಪೆನಿಯ ಬೃಹದಾಕಾರದ, ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಬೆಲೂನು ಅದಕ್ಕೆ ಕಟ್ಟಿದ್ದ ಹಗ್ಗಗಳನ್ನು ಜೋರಾಗಿ ಎಳೆಯುತ್ತ ಮಾಳಿಗೆಯ ಮಧ್ಯದಲ್ಲಿತ್ತು.

* * *

ಬನೇಶ್ (ಉರುಫ್ ಬಹುವೇಗದ) ಫೆನೆ ತನ್ನ ಚಿಕ್ಕಮ್ಮನ ಮನೆಯಲ್ಲಿ ರಜಾದಿನ ಕಳೆಯಲು ಮುಂಬಯಿಯಲ್ಲಿ ಮಾತುಂಗಕ್ಕೆ ಬಂದಿದ್ದ. ಸ್ಪರ್ಧೆಯ ಜಾಹೀರಾತನ್ನು ಪತ್ರಿಕೆಗಳಲ್ಲಿ ನೋಡಿದ್ದ, ತಾನೂ ಭಾಗವಹಿಸಬೇಕು ಎಂದು ಅವನ ಆಸೆ.

"ನಾನೇನೂ ಧ್ಯಾನೇಶ್ವರನಲ್ಲ ಅಂತ ನನಗೆ ಗೊತ್ತು," ಅವನು ತನ್ನ ಚಿಕ್ಕಮ್ಮನಿಗೆ ಹೇಳಿದ, "ಸಾವಿರಾರು ಪಂಕ್ತಿ ಪದ್ಯಗಳನ್ನು ನಾನು ಬರೆಯಲಾರೆ. ಆದರೆ ಹತ್ತು ಪದಗಳನ್ನು ಜೋಡಿಸೋದಕ್ಕೆ ದೊಡ್ಡ ಸಾಹಿತಿ ಏನೂ ಬೇಕಿಲ್ಲ!"

"ನನಗೆ ಅದು ಗೊತ್ತಿಲ್ಲವೇ! ಏನೇ ಆದರೂ ನೀನು ಬಹು ವೇಗದ ಫೆನೆ ತಾನೇ!" ಅವನ ಚಿಕ್ಕಮ್ಮ ಹೇಳಿದರು. "ಆದರೆ ನಿನ್ನ ವಾಕ್ಯ ನಿಜವಾಗಿಯೂ ಸೊಗಸಾಗಿರಬೇಕು. ಅದಕ್ಕೆ ಬಹುಮಾನ ಬಂದೇ ಬರಬೇಕು! ಸುಮ್ಮನೆ..." ಅಷ್ಟು ಹೊತ್ತಿಗೆ ಮೇಲೆ ಮೇಲೆ ಕೆಮ್ಮು ಬಂದು ಅವರು ನಿಲ್ಲಿಸಿದರು. ಜಾಕ್ ಕೆಮ್ಮಿನ ಮಾತ್ರೆಗಳಿಗೆ ಮೊದಲನೆ ಗಿರಾಕಿ ಸಿಕ್ಕಿದಂತಾಯಿತು!

"ತಡೆಯಿರಿ!" ಅವನ ಬಾಯಿಂದ ಹೊರಟು ಮಾತನ್ನು ತುಟಿಗಳು ರೂಪಿಸುತ್ತಿದ್ದಂತೆ ಬಾಯಿ ತೆರೆದು ಕೊಂಡು ಬನೇಶ್ ತನ್ನ ಚಿಕ್ಕಮ್ಮನನ್ನೆ ಕಣ್ಣು ರೆಪ್ಪೆ ಹಾಕದೆ ದಿಟ್ಟಿಸಿದ.

"ಏನು ವಿಷಯ?" ಅವರೆಂದರು..... ಕೆಮ್ಮು! ಕೆಮ್ಮು!

"ನನಗೆ ಇದ್ದಕ್ಕಿದ್ದ ಹಾಗೇ ಹೊಳೆಯಿತು। ನಾನು ಬರೆಯೋದು ಈ ಚಿತ್ರ, ಒಬ್ಬರ ಗಂಟಲಲ್ಲಿ ಕಪ್ಪೆ ಸಿಕ್ಕಿಹಾಕಿಕೊಂಡಿದೆ. ಆತ 'ಕ್ರೋರ್', 'ಕ್ರೋಕ್' ಎಂದು ಅರಚುತ್ತಿದ್ದಾನೆ. ಮುಂದಿನ ಪಂಕ್ತಿ 'ಕೆಮ್ಮು ಕಾಡುತ್ತಲೆ ಇದ್ದರೆ ಬಿಡುವುದಿಲ್ಲ ಎಂದು.' ಅನಂತರ ಹೀಗೆ ಬರೆಯುತ್ತೇನೆ, 'ಒಂದೇ ಪರಿಹಾರ ಜಾಕ್ ಕೆಮ್ಮಿನ ಬಿಂದು!' ನೋಡಿದಿರಾ! ಹದಿನೈದು ಪದಗಳು ಸಹ ಇಲ್ಲ!"

"ಹುಚ್ಚುಹುಚ್ಚಾಗಿ ಆಡಬೇಡ!" ಕೆಮ್ಮುತ್ತ ಕೊಠಡಿಯಿಂದ ಹೊರಹೋಗುತ್ತಲೇ ಅವನ ಚಿಕ್ಕಮ್ಮ ಎಂದಳು.

* * *

ಸ್ಪರ್ಧೆ ಪ್ರಾರಂಭವಾಯಿತು. ನಂದು ನವತೆಯೂ ಹಾಜರಿದ್ದ.

ನಂದು ನವತೆಯ ಮನಸ್ಸು ಒಳ್ಳೆಯದಾಗಿದ್ದಿರಬಹುದು. ಆದರೆ ಅವನಿಗೆ ಬೊಕಳೆ ಕಥೆಗಳನ್ನು ಹೇಳುವ ಆಸೆಯನ್ನು ತಡೆದುಕೊಳ್ಳುವುದಕ್ಕೆ ಆಗುತ್ತಿರಲಿಲ್ಲ. ಪ್ರಾರಂಭಮಾಡಿಬಿಟ್ಟ ಎಂದರೆ, ಅವನೇ ಕಥೆಯಲ್ಲಿ ಎಷ್ಟು ಮುಳುಗಿಹೋಗುತ್ತಿದ್ದ ಎಂದರೆ, ಒಮ್ಮೊಮ್ಮೆ ಅವನೇ ಕಥೆಯನ್ನು ನಂಬಿಬಿಡುತ್ತಿದ್ದುದೂ ಉಂಟು.

ಆದರೆ ಕಡೆಗೆ ಅವನ ಕಥೆಗಳು ಸುಳ್ಳು ಎನ್ನುವುದು ಬಯಲಾಗುತ್ತಿತ್ತು, ಸತ್ತು ಹೋಗಬಾರದೇ ಎನ್ನಿಸುವಷ್ಟು ಅವನಿಗೆ ನಾಚಿಕೆಯಾಗುತ್ತಿತ್ತು.

ಈ ಮಧ್ಯೆ ಬಹುವೇಗದ ಫೆನೆಯ ಸಾಹಸಗಳ ಪಟ್ಟಿ ಬೆಳೆಯುತ್ತಲೇ ಹೋಯಿತು. ಅವನ್ನು ಕೇಳಿದಾಗ ನಂದು ಸಿಟ್ಟಿನಿಂದ ಬೆಂಕಿಯಾದ.

"ಆ ಬಹುವೇಗದ ಫೆನೆ ಅತೀ ದೊಡ್ಡ ಮನುಷ್ಯ ಆಗ್ತಾ ಇದ್ದಾನೆ," ಸಿಟ್ಟಿನಿಂದ ನಂದು ಹೇಳಿದ.

"ಪ್ರಪಂಚದಲ್ಲೆಲ್ಲ ಅವನಷ್ಟು ಧೈರ್ಯವಂತರೇ ಇಲ್ಲವೇನೋ ಅನ್ನುವ ಹಾಗೆ! ಅವನ ಧೈರ್ಯ ತೋರಿಸೋದಕ್ಕೆ ಅವನಿಗೆ ಅವಕಾಶಗಳು ಒದಗಿ ಬರುತ್ತವೆ, ನನಗಿಲ್ಲ, ಅಷ್ಟೆ. ಬಹುವೇಗದ ಫೆನೆ ಕಾಲಿಟ್ಟ ಕಡೆಯೆಲ್ಲ ಅಪಾಯಗಳು ರಸ್ತೆಯ ಎರಡೂ ಕಡೆಯೂ ಕಾದು ನಿಂತಿರುವ ಹಾಗೇ ಕಾಣುತ್ತೆ!"

"ಅವನ್ನ ಬರಮಾಡಿಕೊಳ್ಳುವುದಕ್ಕೇನು?" ಅವನ ಸ್ನೇಹಿತ ಮುಸಿಮುಸಿ ನಕ್ಕ.

"ನನಗೆ ಅವು ಎದುರಾಗೋದೇ ಇಲ್ಲವಲ್ಲ!"

"ಅದರ ಬದಲು ನೀನೇ ಅವುಗಳ ಕಥೆ ಕಟ್ತೀಯಲ್ಲ! ಯಾವಾಗ್ಲೂ ನೀನು ದೊಡ್ಡದೊಡ್ಡ ಸಾಹಸಗಳನ್ನು ಮಾಡಿದ ಹಾಗೆಯೇ ನಟಿಸ್ತೀಯೆ!" ಅವನ ಸ್ನೇಹಿತ ಚುಚ್ಚಿ ಮಾತನಾಡಿದ. ನಂದು ಕೋಪದಿಂದ, "ಸಾಕು, ಸಾಕು!" ಎಂದು ಹೇಳಿ ಸುಮ್ಮನಾದ.

ಆದರೆ ಅವನಿಗೆ ಬಹುವೇಗದ ಫೆನೆಯನ್ನು ಕಂಡರೆ ಅಸೂಯೆ ಎನ್ನುವುದರಲ್ಲಿ ಸಂಶಯವಿರಲಿಲ್ಲ. ಒಂದಲ್ಲ ಒಂದು ದಿನ ಸ್ವಲ್ಪ ಮಟ್ಟಿಗಾದರೂ ಅವನ ಮುಖಭಂಗ ಮಾಡುವಂತಾಗಲಿ ಎಂದು ಅವನ ಆಸೆ.

ಈಗ ಬಹುವೇಗದ ಫೆನೆ ಸ್ಪರ್ಧೆಯಲ್ಲಿ ಭಾಗವಹಿಸಿದ್ದ. ಅವನು ಇಲ್ಲಿ ಭೇಟಿಯಾಗಬಹುದು ಎಂಬ ಸುಳಿವೇ ನಂದುಗಿರಲಿಲ್ಲ. ಅವನು ಕಲ್ಪನೆಯ ಒಬ್ಬ ದೊಡ್ಡಮನುಷ್ಯ ಮಿಸ್ಟರ್ ಓಕ್‌ನ ಚಿತ್ರವನ್ನು ತನ್ನ ಬೆಲೂನಿನ ಮೇಲೆ ಬರೆದಿದ್ದ, ಅದರ ಕೆಳಗೆ ಕೆಂಪು ಬಣ್ಣದಲ್ಲಿ ಘೋಷಣೆಯನ್ನು ಬರೆಯುತ್ತಿದ್ದ.

"ಮಿಸ್ಟರ್ ಓಕ್....ಉಸಿರು ಸಿಕ್ಕಿಕೊಂಡಾಗ" ಇಷ್ಟು ಬರೆದ, ಅಲ್ಲಿಗೆ ಅವನ ಸ್ಫೂರ್ತಿ ಬತ್ತಿಹೋಯಿತು. ಮುಂದೇನು? ಕಥೆ ಕಟ್ಟುವುದರಿಂದ ಇಲ್ಲಿ ಫಲವಿರಲಿಲ್ಲ. ಇದು ವಾಸ್ತವ ಬದುಕು. ಬಾಯಿಯಲ್ಲಿ ಬ್ರಷ್, ಹಣೆಯಲ್ಲಿ ಗೆರೆಗಳು, ಹೀಗೆ ನಂದು ಸ್ಫೂರ್ತಿಗಾಗಿ ಸುತ್ತ ನೋಡಿದ (ಎಂದರೆ, ಇತರರ ಬೆಲೂನ್‌ಗಳತ್ತ ಎಂದರ್ಥ). ಇದ್ದಕ್ಕಿದ್ದಂತೆ ಅವನು ಆ ಪ್ರಸಿದ್ಧ ಚೌಕುಳಿ ಷರ್ಟ್, ಗುಂಗುರು ಕೂದಲು, ದೊಡ್ಡ ಕಣ್ಣುಗಳನ್ನು ಕಂಡ! ಜೊತೆಗೆ, ಆ ಕಣ್ಣುಗಳು ಅವನನ್ನೆ ದಿಟ್ಟಿಸುತ್ತಿದ್ದವು.

"ಓ-ಓ-ಓ! ಯಾರೀ ಪ್ರಾಣಿ? ಸುಪ್ರಸಿದ್ಧ ಬಹುವೇಗದ ಫೆನೆಯು ಅಲ್ಲವೆ!" ತಿರಸ್ಕಾರದಿಂದ ಹೇಳಿದ ನಂದು. ಆದರೆ ಎಷ್ಟು ಗಟ್ಟಿಯಾಗಿ ಹೇಳಿದನೆಂದರೆ ಅವನ ಮಾತು ಬನೇಶನಿಗೆ ಕೇಳಿಸಿತು.

"ಹೆಲೋ! ಯಾರು ನೀನು?"

"ನನ್ನನ್ನ ನಂದು ನವತೆ ಅಂತ ಕರೀತಾರೆ!" ತಕ್ಷಣ ನಂದು, ತನ್ನನ್ನು ಪರಿಚಯ ಮಾಡಿಕೊಳ್ಳುತ್ತ ಹೇಳಿದ. ಅಷ್ಟು ಪರಿಚಯ ಸಾಕು ಎಂದುಕೊಂಡ. ಅಲ್ಲಿದ್ದ ಜಂಬದ ಪ್ರಾಣಿ ಬಹುವೇಗದ ಫೆನೆ ಮಾತ್ರವೇ ಅಲ್ಲ!

"ನಿಮ್ಮನ್ನು ಕಂಡದ್ದು ಸಂತೋಷ, ಕುಮಾರಿ ನಂದಿನಿ ನವತೆ", ಬಹುವೇಗದ ಫೆನೆ ಹೇಳಿದ.

"ಕುಮಾರಿ! ಏನು ನೀನು ಹೇಳುವುದು!" ಮುಷ್ಟಿಯನ್ನು ಬಿಗಿಮಾಡುತ್ತ ನಂದು ಗುರ್ರೆಂದ.

"ಅಯ್ಯೊ! ಎಂದರೆ ನೀನು ಕುಮಾರಿ ಅಲ್ಲ - ಕುಮಾರ ನಂದು ಅಂತ ಹೇಳ್ತಾ ಇದ್ದೀಯೇನು?" ಹಲ್ಲುಕಿರಿಯುತ್ತ ಬನೇಶ್ ಹೇಳಿದ. "ನನಗೆ ಹೇಗೆ ಗೊತ್ತಾಗಬೇಕು? ಈ ದಿನಗಳಲ್ಲಿ ಹುಡುಗಿಯರೂ ಬೆಲ್‌ಬಾಟಂ ಷರಾಯಿ ಹಾಕಿಕೊಳ್ಳುತ್ತಾರೆ, ಕೂದಲನ್ನು ಸಣ್ಣದಾಗಿ ಕತ್ತರಿಸಿಕೊಳ್ಳುತ್ತಾರೆ. ಆದರೆ ಗಂಡು ಹುಡುಗರು ಲಿಪ್‌ಸ್ಟಿಕ್ ಎಂದೂ ಹಚ್ಚಿಕೊಳ್ಳುವುದಿಲ್ಲ!"

"ಲಿಪ್‌ಸ್ಟಿಕ್!" ನಂದು ಉದ್ಗರಿಸಿದ, ಅವನ ಮುಖ ಬೆಳ್ಳಗಾಯಿತು. ತುಟಿಗಳ ಮೇಲೆ ಬೆರಳಾಡಿಸಿದ, ಬಣ್ಣಹಚ್ಚುವ ಬ್ರಷ್ ಮಾಡಿದ್ದ ಕೆಲಸ ತಿಳಿಯಿತು! ಅವನ ತುಟಿಗಳು ಬಣ್ಣದ ಫಲವಾಗಿ ಕೆಂಪಗೆ ಹೊಳೆಯುತ್ತಿರಬೇಕು!

ಅಕ್ಕಪಕ್ಕದ ಬಹು ಮಂದಿ ಹುಡುಗರು ಇದನ್ನೆಲ್ಲ ನೋಡುತ್ತಿದ್ದರು. ಕೆಲವರು ಫಕ್ಕನೆ ನಕ್ಕುಬಿಟ್ಟರು, ಇತರರು ಮುಸಿಮುಸಿನಗುತ್ತ ತಮ್ಮ ಕೆಲಸವನ್ನು ಮುಂದುವರಿಸಲು ತಿರುಗಿದರು.

ನಂದೂಗೆ ತಾನು ಭೂಮಿಯಲ್ಲಿ ಮಾಯವಾಗಬಾರದೆ ಎನ್ನುವಷ್ಟು ನಾಚಿಕೆಯಾಯಿತು. ಅವನ ಸಂಕೋಚವನ್ನು ಹೆಚ್ಚಿಸುವಂತೆ ಆ ಹೊತ್ತಿಗೆ ಸರಿಯಾಗಿ ಮೇಲ್ವಿಚಾರಕರೊಬ್ಬರು ಅಲ್ಲಿಗೆ ಬಂದರು. ಅವರು

ಎಲ್ಲರನ್ನೂ ಗದರಿಸಿ ನಂದೂ ಕಡೆಗೆ ತುಂಬಾ ಕೋಪದಿಂದ ತಿರುಗಿದರು.

"ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದೀಯೋ ನಾಟಕಕ್ಕೆ ಬಣ್ಣಹಾಕಿಕೊಳ್ಳೋದರಲ್ಲಿ ಭಾಗವಹಿಸುತ್ತಿದ್ದೀಯೋ?" ಅವರು ಗುಡುಗಿದರು.

"ಕ್ಷಮಿಸಿ ಸಾರ್," ನಂದು ತನ್ನ ಷರ್ಟಿನ ತೋಳಿನಿಂದ ತುಟಿಯನ್ನು ಒರೆಸಿಕೊಳ್ಳುತ್ತ ಗೊಣಗಿದ. ಕೋಪದಿಂದ ತನಗೆ ತಾನೇ "ಆ ಬಹುವೇಗದ ಫೆನೆಗೆ ಬುದ್ಧಿ ಕಲಿಸುತ್ತೇನೆ," ಎಂದು ಗೊಣಗಿಕೊಂಡ.

ಬೆಲೂನುಗಳಿಗೆ ಚಿತ್ರ ಬರೆಯುವುದನ್ನು ಎಲ್ಲರೂ ಮುಗಿಸಿದ್ದರು, ಅವುಗಳ ಮೇಲೆ ತಮ್ಮ ಹೆಸರುಗಳನ್ನೂ ವಿಳಾಸವನ್ನೂ ಬರೆದ ಚೀಟಿಗಳನ್ನು ಅಂಟಿಸಿದರು. ಮೇಲ್ವಿಚಾರಕರು ಮಕ್ಕಳನ್ನು ಅವರ ಪಾಡಿಗೆ ಬಿಟ್ಟು ಬೆಲೂನುಗಳನ್ನು ಒಂದು ಕೊಠಡಿಗೆ ತೆಗೆದುಕೊಂಡು ಹೋದರು.

ಸ್ಪರ್ಧಿಗಳೆಲ್ಲ ಸಂಭ್ರಮದಿಂದ ಕಂಪೆನಿಯ ಬೃಹದಾಕಾರದ ಬೆಲೂನಿನ ಸುತ್ತ ನೆರೆದರು. ಮೆಚ್ಚಿಕೆಯಿಂದ ಅದನ್ನೇ ದಿಟ್ಟಿಸುತ್ತ ಅದರ ಸುತ್ತ ನಡೆದಾಡಿದರು.

ಗಾಳಿ ಅಧಿಕವಾಯಿತು. ನೀಲಿ ಮತ್ತು ಬಿಳಿ ಬಣ್ಣಗಳ ಪಟ್ಟೆಗಳಿದ್ದ ಆ ಬೆರಗಾಗಿಸುವ ಬೆಲೂನು ಮೇಲಕ್ಕೆ ಕೆಳಕ್ಕೆ ಕುಣಿದಾಡಲು ಪ್ರಾರಂಭವಾಯಿತು. ಅದರ ಮೇಲೆ ಎರಡೇ ಪದಗಳನ್ನು ಬಣ್ಣದಲ್ಲಿ ಬರೆಯಲಾಗಿತ್ತು, 'ಮೋಕ' ಮತ್ತು 'ಜಾಕ್'. ಎಲ್ಲರೂ ಮೇಲಕ್ಕೆ ನೋಡುತ್ತಿದ್ದರು, ಕೆಳಗೆ ಬೆಲೂನಿನ ಬುಡದಲ್ಲಿ ಏನಾಗುತ್ತಿತ್ತು ಎಂದು ಯಾರೂ ಗಮನಿಸಲಿಲ್ಲ. ಬನೇಶನೂ ಮೇಲೆ ನೋಡುತ್ತಿದ್ದ.

ಬೆಲೂನಿನ ಹಗ್ಗಗಳನ್ನು ಎರಡು ಮೂರು ಹಿತ್ತಾಳೆ ಉಂಗುರಗಳಿಗೆ ಕಟ್ಟಿತ್ತು. ಒಬ್ಬ ಹುಡುಗ ಮಾತ್ರ ಅದನ್ನು ಗಮನಿಸಿದ. ನಂದು ನವತೆ ಕೆಳಕ್ಕೆ ಬಗ್ಗಿ ಸರಸರನೆ ದಪ್ಪವಾದ ಹಗ್ಗದ ಗಂಟನ್ನು ಬಿಡಿಸಿದ.

"ಹಗ್ಗ ಎಷ್ಟು ದಪ್ಪ ಇದೆ!" ಬಹುವೇಗದ ಫೆನೆ ಎಂದ.

"ದಪ್ಪವಾಗಿದೆ, ಗಟ್ಟಿಯಾಗಿದೆ. ನೈಲಾನ್ ಹಗ್ಗ ಇದು," ನಂದು ಅವನಿಗೆ ತಿಳಿಸಿಕೊಟ್ಟ, ಅವನು ಬನೇಶನ ಪಕ್ಕದಲ್ಲಿ ನಿಂತಿದ್ದ. "ಮುಟ್ಟಿ ನೋಡು."

ಬನೇಶ ಹಗ್ಗವನ್ನು ಹಿಡಿದುಕೊಂಡದ್ದೆ ತಡ, ನಂದು ಗಂಟನ್ನು ಸಡಿಲಮಾಡಿಬಿಟ್ಟ. ಹಗ್ಗ ಜಾರಿತು, ಬಲವಾದ ಗಾಳಿಯ ಹೊಡೆತವು ಬೆಲೂನು ಆಕಾಶದತ್ತ ಧಾವಿಸುವಂತೆ ಮಾಡಿತು. ಬಹುವೇಗದ ಫೆನೆಯ ಕೈ ಒಂದು ಹಿತ್ತಾಳೆಯ ಉಂಗುರದಲ್ಲಿ ಸಿಕ್ಕಿಕೊಂಡಿತು, ಅವನನ್ನು ಅದು ಎಷ್ಟು ವೇಗವಾಗಿ ಮೇಲಕ್ಕೆಳೆಯಿತೆಂದರೆ ಅವನಿಗೆ ಕೈಯನ್ನು ಬಿಡಿಸಿಕೊಳ್ಳಲು ಆಗಲೇ ಇಲ್ಲ. ಅವನು ಗೊಂದಲದಲ್ಲಿ ಹಗ್ಗವನ್ನು ಇನ್ನೊಂದು ಕೈಯಲ್ಲಿ ಹಿಡಿದುಕೊಂಡುಬಿಟ್ಟ, ಬಲವನ್ನೆಲ್ಲ ಬಳಸಿ ಬೆಲೂನನ್ನು ಕೆಳಕ್ಕೆ ಎಳೆಯಲು ಪ್ರಯತ್ನಿಸಿದ, ಆದರೆ ಆ ತೆಳ್ಳಗಿನ ವೀರನಿಗೆ ಅದರ ಮೇಲೇರುವ ಶಕ್ತಿಯನ್ನು ಮಣಿಸಲು ಸಾಧ್ಯವಾಗಲಿಲ್ಲ. ಬೆಲೂನು ಬಹು ಮೇಲಕ್ಕೇರಿತು - ಬಹುವೇಗದ ಫೆನೆ ಅದನ್ನು ಗಟ್ಟಿಯಾಗಿ ಹಿಡಿದುಕೊಂಡು ಅದರ ಜೊತೆಗೇ ಮೇಲಕ್ಕೇರಿದ.

ಬಹುವೇಗದ ಫೆನೆ ಇದ್ದಕ್ಕಿದ್ದಂತೆ ಬೆಲೂನಿನೊಡನೆ ಮೇಲಕ್ಕೇರಿದುದನ್ನು ಕಂಡಾಗ ಮಕ್ಕಳಿಗೆ ತಮ್ಮ ಕಣ್ಣುಗಳನ್ನೆ ನಂಬುವುದಕ್ಕೆ ಆಗಲಿಲ್ಲ. ಅದನ್ನು ತಮ್ಮ ಕಣ್ಣಿನಿಂದಲೇ ನೋಡದೆ ನಂದುವಿನ ಬಾಯಿಂದ ಮಾತ್ರ ಕೇಳಿದ್ದರೆ, ಅದೊಂದು ಅವನ ಬುರುಡೆ ಎಂದೇ ಅವರು ಭಾವಿಸುತ್ತಿದ್ದರು.

ಭಯದಿಂದ ನಂದೂನ ಬಾಯಿ ಬಾಗಿಹೋಯಿತು. ಬನೇಶನ ಮೇಲೆ ಎಷ್ಟೇ ಕೋಪವಿದ್ದರೂ ಅವನನ್ನು ಆಕಾಶದಲ್ಲಿ ಬಿಸುಡಬೇಕೆಂದೇನೂ ಅವನ ಉದ್ದೇಶವಾಗಿರಲಿಲ್ಲ. ಅವನಿಗೆ ತೊಂದರೆಮಾಡಬೇಕು ಎಂದಷ್ಟೆ ಅವನ ಉದ್ದೇಶ. ಆದರೆ ಬನೇಶ ಹಿತ್ತಾಳೆ ಉಂಗುರಗಳನ್ನು ಮುಟ್ಟಿಬಿಟ್ಟ, ಅದರಿಂದ ಬೆಲೂನು ಹಾರಿಹೋಯಿತು! ನಿಜ, ಇಂತಹ ಯೋಚನೆ ಮಾಡಿದ್ದೇನೂ ಒಳ್ಳೆಯ ಬುದ್ಧಿಯಲ್ಲ; ಆಮೇಲೆ ಬನೇಶನ ಕ್ಷಮೆ ಕೇಳಿರುತ್ತಿದ್ದ. ಜನ ಕಷ್ಟದಲ್ಲಿರುವುದನ್ನು ನೋಡುವುದೆಂದರೆ ನಂದುಗೆ ಸಂತೋಷ. ಆದರೆ ಇದು ಮಿತಿ ಮೀರಿತು.

"ಅಯ್ಯೋ ದೇವರೆ, ಅವನು ಹಾರಿಹೋದ!"

"ಕೆಳಕ್ಕೆ ಎಳೆಯಿರಿ ಅವನನ್ನು! ಹಿಂದಕ್ಕೆಳೆಯಿರಿ!"

"ಹಗ್ಗ ಹಿಡಿದುಕೊಳ್ಳಿ, ಪೋಲೀಸ್! ಪೋಲೀಸ್! ಬೆಂಕಿ ಆರಿಸುವವರೇ!"

ಎಲ್ಲ ಅಸ್ತವ್ಯಸ್ತ , ಪ್ರತಿಯೊಬ್ಬರೂ ಗಾಬರಿಯಾಗಿ ಎಲ್ಲೆಲ್ಲೂ ಓಡುತ್ತ ಇತರರೆಲ್ಲರಿಗೂ ಹೀಗೆ ಮಾಡಿ,ಹಾಗೆ ಮಾಡಿ ಎಂದು ಹೇಳುತ್ತಿದ್ದರು.

ವಾಹನ ಸಂಚಾರದ ದೀಪಗಳೆಲ್ಲ ಕೆಂಪು ಬಣ್ಣಕ್ಕೆ ತಿರುಗಿದ್ದಂತೆ ವೊರ್ಲಿ ಸಮುದ್ರದೆದುರು ಹೋಗುತ್ತಿದ್ದ ಕಾರುಗಳ ಸಾಲೆಲ್ಲ ನಿಂತುಹೋಯಿತು. ನೂರು ದೇವಸ್ಥಾನಗಳಲ್ಲಿ ಶಂಖ ಊದಿದ ಹಾಗೆ ಕಾರಿನ ಹಾರ್ನ್‌ಗಳ ಶಬ್ಧ ಪ್ರಾರಂಭವಾಯಿತು.

ಬಹುವೇಗದ ಫೆನೆಯನ್ನು ಹೊತ್ತುಕೊಂಡು ಬೆಲೂನ್ ಇನ್ನೂ ಮೇಲಕ್ಕೆ ಏರಿತು. ಪಶ್ಚಿಮದ ಕಡೆಗೆ ಗಾಳಿ ಬೀಸಲು ಪ್ರಾರಂಭವಾಗಿ, ನೆಟ್ಟಗೆ ಮೇಲಕ್ಕೇರುತ್ತಿದ್ದ ಬೆಲೂನನ್ನು ಪಶ್ಚಿಮಕ್ಕೆ ದೂಡಲು ಪ್ರಾರಂಭಿಸಿತು.

ಯಾವ ಹುಡುಗನ ರಕ್ತವೇ ಆಗಲಿ ತಣ್ಣಗಾಗುವಂತೆ ಮಾಡುವಷ್ಟು ಭಯಗೊಳಿಸುವ ಸ್ಥಿತಿ ಅದು. ಬಹುವೇಗದ ಫೆನೆ ಮೈನಡುಗಿಸುವ ಅನೇಕ ಸನ್ನಿವೇಶಗಳನ್ನು ಎದುರಿಸಿದ್ದ. ಆದರೆ ಇಂತಹ ಸನ್ನಿವೇಶವನ್ನ - ನೀಲಿ ಆಕಾಶದ ಶೂನ್ಯ ವೈಶಾಲ್ಯಕ್ಕೆ ಎಳೆಮೊಯ್ಯುವುದನ್ನ - ಎದುರಿಸಿರಲಿಲ್ಲ.

ಒಮ್ಮೆ ಅವನು ನೀಫಾದ ಯುದ್ಧ ರಂಗದಲ್ಲಿ ಪ್ಯಾರಷೂಟ್‌ನಲ್ಲಿ ಇಳಿದಿದ್ದ. ಆದರೆ ಅದನ್ನು ಒಪ್ಪಿ ಮಾಡಿದ್ದು ಅಲ್ಲದೆ ಭೂಮಿತಾಯಿಯತ್ತ ತೇಲಿ ಇಳಿಯುತ್ತೇನೆ ಎಂಬ ವಿಶ್ವಾಸವಿತ್ತು. ಈಗ ಅಂತಹ ವಿಶ್ವಾಸವೇನೂ ಇರಲಿಲ್ಲ. ಈ ಬೆಲೂನು ಅವನನ್ನು ಎಲ್ಲಿಗೆ ತೆಗೆದುಕೊಂಡು ಹೋಗುವುದೋ, ಎಷ್ಟು ದೂರವೋ, ಎಷ್ಟು ಹೊತ್ತೋ, ಅವನನ್ನು ಎಲ್ಲಿ ಬೀಳಿಸುವುದೋ ಭಗವಂತನಿಗೇ ಗೊತ್ತು.

ಬಹುವೇಗದ ಫೆನೆಯ ಮೈಯಿಂದ ಬೆವರು ಸುರಿದುಹೋಯಿತು. ಕೆಳಕ್ಕೆ ನೋಡಿದಾಗ ತಲೆ ತಿರುಗಿತು. ಬಹುವೇಗದ ಫೆನೆಗೆ ವಿಪರೀತ ಭಯವಾಯಿತು....ಅವನೇನೂ ವಿನೋದ ಚಿತ್ರಾವಳಿಯ ಅತಿಮಾನವನಾಗಿರಲಿಲ್ಲ, ಅವನೊಬ್ಬ ದಿಕ್ಕೆಟ್ಟ ಪುಟ್ಟ ಹುಡುಗ ಅಷ್ಟೆ.

ಕೈಗಳು ಜಡವಾಗುತ್ತಿದೆ ಎಂದು ಅವನಿಗೆ ಅನ್ನಿಸಿತು. ಒಂದು ಕೈ ಹಗ್ಗವನ್ನು ಬಿಗಿಯಾಗಿ ಹಿಡಿದುಕೊಂಡಿತ್ತು , ಮತ್ತೊಂದು ಹಿತ್ತಾಳೆ ಉಂಗುರದಲ್ಲಿ ಸಿಕ್ಕಿಕೊಂಡಿತ್ತು. ಬೆಲೂನನ್ನು ಬಿಡಲೇಬಾರದು, ಬಿಟ್ಟರೆ ತನ್ನ ಗತಿಮುಗಿದ ಹಾಗೆಯೇ ಎಂದು ಅವನಿಗೆ ಗೊತ್ತಿತ್ತು. ನೆಲಕ್ಕೆ ಅಪ್ಪಳಿಸಿದರೆ ತಾನು ಅಪ್ಪಚ್ಚಿಯಾಗಿಬಿಡುತ್ತೇನೆ! "ದೇವರೇ! ಕಾಪಾಡಪ್ಪ!" ಎಂದು ಕೂಗಿಕೊಂಡ.

ಬುಟ್ಟಿಯು ನೆಲಕ್ಕೆ ಇಳಿಯುವುದು ಸಾಧ್ಯವಾಗುವಂತೆ ಗಾಳಿಯನ್ನು ನಿಧಾನವಾಗಿ ಹೊರಕ್ಕೆ ಬಿಡಲು ಒಂದು ಬಿರಡೆ ಇರುತ್ತದೆ ಎನ್ನುವುದು ಅವನಿಗೆ ಥಟ್ಟನೆ ನೆನಪಿಗೆ ಬಂದಿತು.

ಆದರೆ ಇದು ಅಂತಹ ಬೆಲೂನಲ್ಲ. ಎಂತಹದೇ ಬಿರಡೆ ಇದಕ್ಕೆ ಇರಲಿಲ್ಲ. ಇದರಿಂದ ಗಾಳಿಯನ್ನು ಹೊರಕ್ಕೆ ಬಿಡುವುದು ಹೇಗೆ?

ಅವನ ಕವಣೆ ಅವನ ಹತ್ತಿರ ಇತ್ತು. ಜೊತೆಗೆ ಕೆಲವು ಪೆಪರ್-ಮಿಂಟ್‌ಗಳು ಆದರೆ ಅವನು ತನ್ನ ಜೇಬಿನಿಂದ ಕವಣೆಯನ್ನು ಹೊರಕ್ಕೆ ತೆಗೆದು ಬಳಸುವುದು ಹೇಗೆ, ಎರಡು ಕೈಗಳೂ ಹಗ್ಗದಲ್ಲಿ ಸಿಕ್ಕಿಕೊಂಡು ಬಿಟ್ಟಿದ್ದವಲ್ಲ?

ಬೆಲೂನು ಊರಿನ ಛಾವಣಿಗಳ ಮೇಲೆ ತೇಲುತ್ತ ಸಮುದ್ರದತ್ತ ಸಾಗಿತು. ಹಾಜಿ ಅಲಿ ಪೂಜಾಸ್ಥಳ, ಹಡಗುಗಳು, ನೊರೆಗಳ ಚಿತ್ತಾರದ ಅಲೆಗಳು ಎಲ್ಲ ಕಾಣುತ್ತಿದ್ದವು.

ಸಮುದ್ರದಲ್ಲಿ ಬಿದ್ದರೆ ಗಾಯವಂತೂ ಆಗುತ್ತದೆ, ಆದರೆ ಉಳಿದಾದರೂ ಉಳಿದುಕೊಳ್ಳಬಹುದು, ಕೆಳಗಿದ್ದವರು ಯಾರಾದರೂ ಬಂದೂಕು ಹಾರಿಸಿ ಬೆಲೂನನ್ನು ಒಡೆದುಬಿಡಬಾರದೆ ಎನ್ನಿಸಿತು ಅವನಿಗೆ.

ಪ್ರಜ್ಞೆ ತಪ್ಪಿಹೋಗುತ್ತದೆ ತನಗೆ ಎನ್ನಿಸಿತು ಬಹುವೇಗದ ಫೆನೆಗೆ.

ಬನೇಶ ಒಂದು ಕೈಯಿಂದ ಹಿತ್ತಾಳೆ ಉಂಗುರವನ್ನು ಭದ್ರವಾಗಿ ಹಿಡಿದುಕೊಂಡ, ಇನ್ನೊಂದು ಕೈಯಿಂದ ತನ್ನ ಬೆಲ್ಟನ್ನು ತೆಗೆಯಲು ಪ್ರಯತ್ನಿಸಿದ. ಅದೇನೂ ಸುಲಭವಾಗಿರಲಿಲ್ಲ. ಆದರೆ ಕಡೆಗೂ ಮಾಡಿಯೇ ಮಾಡಿದ.

ಬನೇಶ ಬೆಲ್ಟಿನ ಕೊನೆಯನ್ನು ಗಟ್ಟಿಯಾಗಿ ಹಿಡಿದುಕೊಂಡು, ಛಾಟಿಯಿಂದ ಹೊಡೆದ ಹಾಗೆ ವ್ಯಾಕ್, ವ್ಯಾಕ್ ಎಂದು ಹೊಡೆದ.

ಬೆಲ್ಟಿನ ಕೊಕ್ಕೆಯನ್ನು ಬೆಲೂನಿನ ಮೇಲೆ ಗಟ್ಟಿಯಾಗಿ ಹೊಡೆದ, ಆದರೂ ಒಂದು ಎರಡು, ಮೂರು, ನಾಲ್ಕು, ಐದು, ಆರು ಬಾರಿ ಹೊಡೆಯಬೇಕಾಯಿತು ಕೊಕ್ಕೆಯ ಸೂಜಿ ಪ್ಲ್ಯಾಸ್ಟಿಕ್ಕನ್ನು ಚುಚ್ಚುವಂತೆ ಮಾಡಲು.

ತೂತೊಂದು ಬೆಲೂನಿನ ಪಾರ್ಶ್ವವನ್ನು ಜರ್ರೆಂದು ಹರಿಯಿತು, ಫೂಷ್ ಎಂದು ಗಟ್ಟಿಯಾಗಿ ಶಬ್ದಮಾಡುತ್ತ ಗಾಳಿ ಹೊರಕ್ಕೆ ನುಗ್ಗಿತು.

ನಿಧಾನವಾಗಿ ಆದರೆ ನಿಸ್ಸಂದೇಹವಾಗಿ ಬೆಲೂನು ಕೆಳಕ್ಕೆ ಇಳಿಯಲು ಪ್ರಾರಂಭಿಸಿತು. ಕೆಳಗೆ ಬೆಸ್ತರ ದೋಣಿಗಳಲ್ಲಿ ಬೆಸ್ತರು ಸಮುದ್ರದಲ್ಲಿನ ಮೀನುಗಳನ್ನು ದಿಟ್ಟಿಸುತ್ತಿರಲಿಲ್ಲ, ಮೇಲೆ ಆಕಾಶದಲ್ಲಿದ್ದ ದುರದೃಷ್ಟವಂತ ಹುಡುಗನನ್ನು ದಿಟ್ಟಿಸುತ್ತಿದ್ದರು. ಅವನ ಗತಿ ಏನು? ಅವರು ಸಹಾಯಮಾಡಲು ಸಾಧ್ಯವಿತ್ತೆ?

ಇಲ್ಲಿ ಅವರೇನು ಮಾಡಬಹುದು? ಅವರ ಸಾಮ್ರಾಜ್ಯ ಸಮುದ್ರ, ಆಕಾಶವಲ್ಲ

ಆದರೆ ಅವರು ಬೆಲೂನು ಬೀಳಲು ಸ್ಥಳ ಸಿದ್ಧ ಮಾಡಿದರು, ಸರಸರನೆ ಒಂದು ಬಲೆಯನ್ನು ಅಗಲವಾಗಿ, ಬಿಗಿಯಾಗಿ ಹರಡಿದರು. ಹುಡುಗನಿಗಿದ್ದ ಭರವಸೆ ಅದೊಂದೇ.

ಬೆಲೂನು ಸರಿಯಾಗಿ ಅದರಲ್ಲಿಯೆ ಬಿತ್ತು. ಬಲೆಗೆ ಲಾಭವಾಗಿತ್ತು.

* * *

ಎಲ್ಲಿದ್ದೇನೆ ನಾನು?

ಕೆಮ್ಮು! ಕೆಮ್ಮು! ಕೆಮ್ಮು! "ಮನೇಲಿದ್ದೀಯ," ಚಿಕ್ಕಮ್ಮ ಉತ್ತರ ಹೇಳಿದಳು "ಗಾಬರಿಯಾಗುವ ಅಗತ್ಯ ಇಲ್ಲ ಅಂತ ಇವರು ಹೇಳಿದರು."

'ಇವರು' ಅವನ ಚಿಕ್ಕಪ್ಪ, ವೈದ್ಯರು. ಅವನ ಚಿಕ್ಕಪ್ಪ ಮುಂಬಯಿಯಲ್ಲಿ ಖ್ಯಾತ ವೈದ್ಯರು.

"ನಿನಗೇನೂ ಪೆಟ್ಟಾಗಲಿಲ್ಲವಲ್ಲ, ಬನೇಶ್?"

"ಇಲ್ಲ, ಆದರೆ ಅದನ್ನು ನೆನೆಸಿಕೊಂಡರೆ ವಾಂತಿ ಬರುತ್ತದೆ. ಆದರೆ ಅಳ್ತಾ ಇರೋದು ಯಾರು, ಚಿಕ್ಕಮ್ಮ? ಯಾರೋ ಅಳ್ತಾ ಇರೋದು ಕೇಳತ್ತೆ."

"ನಿನ್ನ ಸ್ನೇಹಿತ."

"ಯಾರು-ನಂದು? ನಂದು? ನವತೆ? ನಿನಗೇನಾಯಿತು?"

"ಬನೇಶ್-ನನಗೆ ದುಃಖವಾಗುತ್ತದೆ! ನಿಜವಾಗಿಯೂ! ಇದೆಲ್ಲ ನನ್ನ ತಪ್ಪಿನಿಂದ!"

"ನಿನ್ನ ತಪ್ಪು?"

ಕೆಲವು ಮಾತುಗಳಲ್ಲಿ ನಂದು ತಾನೇನು ಮಾಡಿದೆ ಎನ್ನುವ ಕಥೆಯನ್ನು ಹೇಳಿದ. ಅವನು, "ನಾನು ತುಂಬಾ ಕೆಟ್ಟವನು, ತುಂಬಾ ದುಷ್ಟ, ನಾನೊಂದು ಕತ್ತೆ, ನನ್ನನ್ನು ಕ್ಷಮಿಸಿದ್ದೇನೆ ಅಂತ ಹೇಳು ಬಹುವೇಗದ ಫೆನೆ! ನನಗೆ ಬಹುಮಾನವಂತೂ ಬರುವುದಿಲ್ಲ, ಬಂದರೂ ನಾನು ಅದನ್ನ ಮುಟ್ಟುವುದಿಲ್ಲ, ಪ್ರಮಾಣ ಮಾಡಿ ಹೇಳ್ತೀನೆ!" ಎಂದ.

ಬನೇಶ ಎದ್ದು ಕುಳಿತು ಕಣ್ಣನ್ನು ಅಗಲವಾಗಿ ತೆರೆದು ನಂದುವನ್ನ ದಿಟ್ಟಿಸಿದ.

ಅಷ್ಟು ಹೊತ್ತಿಗೆ ಅವನ ಚಿಕ್ಕಪ್ಪ ಬಂದರು. "ಭೇಷ್ ಬಹುವೇಗದ ಫೆನೆ," ಅವರಂದರು. "ಜ್ಞಾನ ಬಂದಿದೆಯಲ್ಲ, ನಿನಗೆ ಗೊತ್ತೇನು, ನೀನು ಆಗ ಬೀಳದೆ ಇದ್ದರೆ ವಾಯುದಳದವರು ನಿನ್ನನ್ನ ಉಳಿಸ್ತಿದ್ರು. ಅದಕ್ಕೆ ಏರ್ಪಾಡು ಮಾಡೋದಕ್ಕೆ ಎಲ್ಲ ಕಡೆಗೂ ಫೋನ್ ಮಾಡಿ ಆಗಿತ್ತು. ಇನ್ನು ಏನಾಗಿದೆ ಗೊತ್ತಾ? ಖೋಕ ಕಂಪನಿಯವರು ಈಗ ತಾನೆ ಫೋನ್ ಮಾಡಿದ್ದರು. ನಿನಗೆ ಒಂದು ವಿಶೇಷ ಬಹುಮಾನ ಕೊಡ್ತಿದ್ದಾರೆ. ಜಾಕ್ ಕೆಮ್ಮಿನ ಬಿಂದುಗಳಿಗೆ ಇಷ್ಟೊಂದು ಪ್ರಚಾರ ಅವರಿಗೆ ಸಿಕ್ಕಿಯೇ ಇರಲಿಲ್ಲ!"

"ನ್ಯಾಯವಾಗಿ ಬಹುಮಾನ ನನಗಲ್ಲ ಬರಬೇಕಾದ್ದು, ನಂದು ನವತೆಗೆ!"

ನಂದೂನ ಕಣ್ಣುಗಳ ತುಂಬಾ ನೀರು, ಬನೇಶನ ಕಣ್ಣುಗಳು ತುಂಟತನದಿಂದ ಹೊಳೆಯುತ್ತಿದ್ದವು.

# ಸ್ವರ್ಗಕ್ಕೆ ಏಳು ಮೆಟ್ಟಿಲುಗಳು

ಎಸ್. ಕೆ. ಆಚಾರ್ಯ

ಒಂದು ದಿನ ಬೆಳಗ್ಗೆ ವೃತ್ತಪತ್ರಿಕೆಯನ್ನು ಎತ್ತಿಕೊಂಡಾಗ ಈ ಮಾತುಗಳು ನನ್ನೆಡೆಗೆ ನೆಗೆದು ಬಂದವು.

"ಹಲೊ, ಯುವ ಜನರೆ! ಗಗನಯಾತ್ರಿಗಳಾಗುವ ಕನಸು ಕಾಣುತ್ತಿರುವಿರೇನು?"

ಉದ್ವೇಗದಿಂದ ನಾನು ಹಾರುವುದರಲ್ಲಿದ್ದೆ. ಅಷ್ಟರಲ್ಲಿ ಅಚ್ಚಾಗಿದ್ದ ಮಾತುಗಳಲ್ಲಿ ನನ್ನ ಕಣ್ಣು ನೆಟ್ಟಿತು. ಹೌದು, ಅದೊಂದು 'ಜಾಹೀರಾತು'!

ಮುಂದಕ್ಕೆ ಓದಿದೆ.

"ಮುಂಬಯಿಯ ಸಮಂತ ಚಂದ್ರಶೇಖರ್ ಆಕಾಶಸಂಶೋಧನಾ ಕೇಂದ್ರಕ್ಕೆ ಗಗನಯಾತ್ರಿಗಳು ಬೇಕಾಗಿದ್ದಾರೆ! ಗಗನಯಾತ್ರಿಗಳಾಗಬಯಸುವ ಯುವಕರು ಅರ್ಜಿ ಸಲ್ಲಿಸಬಹುದು...."

"ಸಮಂತ ಚಂದ್ರಶೇಖರ್? ಭಾರತದ ಮಹಾನ್ ಖಗೋಳ ವಿಜ್ಞಾನಿ! ಬೊಂಬಿನ ಕೊಳವೆಯ ಮೂಲಕ ಆಕಾಶವನ್ನು ವೀಕ್ಷಿಸಿ, ಅತ್ಯಂತ ಶಕ್ತ ದೂರದರ್ಶಕದಿಂದ ವೀಕ್ಷಿಸುವ ಆಧುನಿಕ ವಿಜ್ಞಾನಿಯಷ್ಟೆ ನಿಖರವಾಗಿ ನಕ್ಷತ್ರಗಳ ವಿಷಯವಾಗಿ ಮುಂದೆ ತಿಳಿದು ಬಂದುದೆಲ್ಲವನ್ನೂ ಮೊದಲೇ ಹೇಳಿದ್ದ ವಿಜ್ಞಾನಿ ಅವರೇ ಅಲ್ಲವೆ?"

ನಾನು ಜೋರಾಗಿ ತಲೆಯಲ್ಲಾಡಿಸಿ ಕಾಗದ ಮತ್ತು ಲೇಖನಿಗಾಗಿ ಸುತ್ತ ನೋಡಿದೆ.

ಕಾಲೇಜ್ ಆವರಣದಲ್ಲಿದ್ದ ದೊಡ್ಡ ಮಾವಿನ ಮರಕ್ಕೆ ಮೊಳೆ ಹೊಡೆದು ನೇತುಹಾಕಿದ್ದ ಅಂಚೆಪೆಟ್ಟಿಗೆಯೊಳಕ್ಕೆ ಅವತ್ತು ಬೆಳಿಗ್ಗೆ ನಾನು ಮುಂಬಯಿಗೆ ಒಂದು ಕಾಗದವನ್ನು ಹಾಕಿದೆ.

ಆ ಕಾಲದಲ್ಲಿ ನಾನು ಕಾಲೇಜಿನಲ್ಲಿ ವಿದ್ಯಾರ್ಥಿ, ಅದಕ್ಕಿಂತ ಮುಖ್ಯವಾಗಿ ನಮ್ಮ ಸ್ಥಳದ ವಿಮಾನ ಹಾರಾಟ ಸಂಘದ ಸದಸ್ಯ; ಸಣ್ಣ ವಿಮಾನವನ್ನು ನಿರ್ವಹಿಸಲು ಲೈಸೆನ್ಸ್ ಸಹ ದೊರೆತಿತ್ತು. ನನಗೆ ಪರಿಚಿತವಾದ ನೀಲಿ ಆಕಾಶದ ಆಕರ್ಷಣೆ ಸ್ವಲ್ಪವೂ ಇರಲಿಲ್ಲ. ಸ್ವರ್ಗದತ್ತ ಬಹು ಎತ್ತರಕ್ಕೇರಬೇಕೆಂದು ನನ್ನ ಆಸೆ. ಆದರೆ ದುರದೃಷ್ಟ ಎಂದರೆ ವಿಮಾನವು ರಾಕೆಟ್ ಅಲ್ಲ. ಭೂಮಿಯ ವಾತಾವರಣ ಮತ್ತು ಆಕಾಶವೆಂದು ಕರೆಯುವ ನಮಗೆ ಗಾಢವಾದ ಸ್ಥಳಕ್ಕೆ ಹಾರಲು ಆಕಾಶನೌಕೆ ಬೇಕು.

ರಾಕೆಟ್‌ಗಳ ಕನಸನ್ನು ನಾನು ಕಾಣುತ್ತಿದ್ದಾಗ ವೃತ್ತ ಪತ್ರಿಕೆಯಲ್ಲಿನ 'ಜಾಹೀರಾತು' ನನ್ನ ಕಣ್ಣಿಗೆ ಬಿತ್ತು.

ನನಗೆ ಕರೆ ಬರುತ್ತಲೇ ಮುಂಬಯಿಗೆ ಹೊರಟೆ.

ಆ ಕೆಲಸಕ್ಕಾಗಿ ಬಂದ ಅಭ್ಯರ್ಥಿಗಳ ಕ್ಯೂ ನೋಡಿ ನನ್ನ ಮನಸ್ಸು ಕುಸಿಯಿತು. ದೇಶದ ನಾಲ್ಕು ಮೂಲೆಗಳಿಂದಲೂ ಅವರು ಬಂದಿದ್ದರು. ಎಲ್ಲ ದೈತ್ಯರಾಗಿಯೇ ಕಾಣುತ್ತಿದ್ದರು - ದೇಹ ಗಟ್ಟಿಮಾಡಿಕೊಂಡವರು, ಜಟ್ಟಿಗಳು, ಅಧಿಕಭಾರದ ಮುಷ್ಟಿಕಾಳಗ ಪಟುಗಳು! ಅವರ ಜೊತೆಗೆ ಹೋಲಿಸಿದರೆ ನಾನು ವಾಮನನೇ.

ದೈತ್ಯರು ನನ್ನ ಕೈಕುಲುಕಿದರು. ತಲೆಯಿಂದ ಕಾಲಿನವರೆಗೆ ನೋಡಿದರು, ಒಳಗೊಳಗೇ ನಕ್ಕರು. ನಾನೇನೂ ಎತ್ತರವಿಲ್ಲ ಎನ್ನುವುದು ನನಗೆ ಗೊತ್ತು, ಆದರೆ ಅವರ ತಿರಸ್ಕಾರ ನನ್ನನ್ನು ಕೆಣಕಿತು. ಅಷ್ಟು ಸುಲಭವಾಗಿ ನಾನು ಸೋಲೊಪ್ಪಿಕೊಳ್ಳುವಂತಿರಲಿಲ್ಲ.

ನನ್ನ ಮನಸ್ಸಿನಲ್ಲಿ ನನ್ನ ಅರ್ಹತೆಗಳನ್ನು ಪಟ್ಟಿ ಮಾಡಿಕೊಂಡೆ. ಒಳ್ಳೆ ಕ್ರೀಡಾಪಟು ನಾನು, ಪ್ರತಿ ವರ್ಷ ಕಾಲೇಜಿನಲ್ಲಿ ಬಹುಮಾನಗಳನ್ನು ಪಡೆದಿದ್ದೆ. ಆದರೆ ಪ್ರಾಯಶಃ ಅದೇನೂ ಅಷ್ಟು ಮುಖ್ಯವಲ್ಲ. ನನಗೆ

ಇನ್ನೊಂದು ಅರ್ಹತೆ ಇತ್ತು. ಅನೇಕ ವರ್ಷಗಳ ಹಿಂದೆ ಉಪಾಧ್ಯಾಯರೊಬ್ಬರು ನನಗೆ ಪ್ರಾಣಾಯಾಮ ಮತ್ತು ಆಸನಗಳಲ್ಲಿ ಕಟ್ಟುನಿಟ್ಟಾದ ಶಿಕ್ಷಣ ಕೊಟ್ಟಿದ್ದರು; ಅವು, ಪ್ರಾಚೀನ ಕಾಲದ ಋಷಿಗಳಿಂದ ಪರಂಪರಾಗತವಾಗಿ ಬಂದ ಶ್ವಾಸೋಚ್ಛ್ವಾಸದ ಮತ್ತು ದೇಹದ ಭಂಗಿಗಳ ವ್ಯಾಯಾಮಗಳು. ಈ ಶಿಕ್ಷಣ ನನಗೆ ವಿಶ್ವಾಸವನ್ನು ತಂದುಕೊಟ್ಟಿತು. ದೈತ್ಯರಿಗಾಗಲಿ ಇತರರಿಗಾಗಲಿ ನಾನು ಜಗ್ಗಬೇಕಾಗಿರಲಿಲ್ಲ.

**ಟಣ್!** ಎಲ್ಲೋ ಒಂದು ಗಂಟೆ ಬಾರಿಸಿತು. ವೈದ್ಯನ ಉಡುಪಿನಲ್ಲಿದ್ದ ಒಬ್ಬಾತ ಇದ್ದಕ್ಕಿದ್ದಂತೆ ಕಾಣಿಸಿಕೊಂಡ. ಪ್ರಯೋಗಕ್ಕೆ ಆರಿಸಿಕೊಂಡ ಪ್ರಾಣಿಗಳನ್ನು ಕರೆದುಕೊಂಡು ಹೋಗುವ ಹಾಗೆ ಪ್ರಯೋಗಶಾಲೆಗೆ ನಮ್ಮನ್ನು ಅವನು ಕರೆದೊಯ್ದ. ಬಿಳಿ ಷರ್ಟಿನ ತೋಳಿದ್ದ ಕೈಯ್ಯನ್ನು ಚಾಚಿ ಅವನೆಂದ, "ಈ ಪೆಟ್ಟಿಗೆಗಳನ್ನು ನೋಡಿ - ಸ್ವರ್ಗಕ್ಕೆ ಕರೆದುಕೊಂಡು ಹೋಗುವ ಏಳು ಮೆಟ್ಟಿಲುಗಳು! ಅವನ್ನು ಹತ್ತಲು ನಿಮಗೆ ಸಾಧ್ಯವಾದರೆ ನೀವು ಸ್ವರ್ಗದ ಬಾಗಿಲನ್ನೆ ತಟ್ಟಬಹುದು - ಇನ್ನೂ ಆಚೆ ಹೋಗಬಹುದು. ತರಬೇತಿಯಲ್ಲಿ ಉತ್ತೀರ್ಣನಾದ ಮನುಷ್ಯ ಆಕಾಶಯಾತ್ರೆಗೆ ಆಯ್ಕೆಯಾಗುತ್ತಾನೆ. ನೋಡಿ ಈಗ."

ವೈದ್ಯನು ತಿಳಿಸಿಕೊಡಲು ಮಾಡಿದ ಪ್ರದರ್ಶನವನ್ನು ನಾನು ಅರ್ಥಮಾಡಿಕೊಳ್ಳುವಷ್ಟರಲ್ಲಿ ತಿಳಿಯದ ಅನುಭವಕ್ಕೆ ನೂಕಲ್ಪಟ್ಟಿದ್ದೆ.

ಬಾಗಿಲೊಂದು ಪಠಾರನೆ ಹಾಕಿಕೊಂಡಿತು. ಇದ್ದಕ್ಕಿದ್ದಂತೆ ಕೆಂಪು ದೀಪವೊಂದು ಆರಿತು, ನಾನು ಕೆಳಕ್ಕೆ ಬೀಳುತ್ತಿದ್ದೇನೆ ಎಂದು ಭಾಸವಾಯಿತು. ಒಂದು ಪಿಶಾಚಿಯ ಹೊಟ್ಟೆಯಲ್ಲಿ ಬಿದ್ದುಬಿಟ್ಟೆ ನಾನು! ಎಲ್ಲೆಲ್ಲೂ ಕಗ್ಗತ್ತಲು, ಸಂಪೂರ್ಣ ನೀರವತೆ! ನನ್ನ ಬೆನ್ನ ಮೂಳೆಯಲ್ಲಿ ನಡುಕ ಹರಿಯಿತು. ಪಿಶಾಚಿಯ ಅನಿರೀಕ್ಷಿತ ಸ್ಪರ್ಶ ನನ್ನನ್ನು ತಲ್ಲಣಗೊಳಿಸಿತು. ಪ್ರಜ್ಞೆ ತಪ್ಪುವ ಹಾಗಾಯಿತು; ಆ ಹೊತ್ತಿಗೆ ನನ್ನ ಬಾಲ್ಯದ ಕಥೆಯೊಂದು ನೆನಪಿಗೆ ಬಂತು. ಕತ್ತಲಲ್ಲಿ ದೃಷ್ಟಿ ಹರಿಸುತ್ತ ನನಗೇ ಪಿಸುದನಿಯಲ್ಲಿ ಹೇಳಿಕೊಂಡೆ: "ನೆನಪಿಡು! ನೀನು ಧ್ರುವ, ಪ್ರಾಚೀನ ಭಾರತದ ಬಾಲಸಂತ."

ತಕ್ಷಣ ಸ್ವಲ್ಪ ಉತ್ತಮ ಎನಿಸಿತು. ಕತ್ತಲಲ್ಲಿ ತಡಕಾಡಿದೆ, ಒಂದು ಕುರ್ಚಿಯನ್ನು ಕಂಡುಕೊಂಡೆ. ಕುಳಿತೆ, ಉಸಿರನ್ನು ಸ್ತಿಮಿತಕ್ಕೆ ತಂದುಕೊಂಡೆ, ಧ್ಯಾನ ಪ್ರಾರಂಭಿಸಿದೆ. ನನ್ನ ಮೇಲೆ ಹತೋಟಿ ಸುಧಾರಿಸಿತು. ಪೆಟ್ಟಿಗೆಯ ತುಂಬ ನೇತಾಡುತ್ತಿದ್ದ ತಂತಿಗಳು ಹೊರಗಡೆ ಇದ್ದ ವೈದ್ಯನಿಗೆನನ್ನ ಚಲನವಲನಗಳ ವಿಷಯ ತಿಳಿಸುತ್ತಿವೆ ಎಂದು ನನಗೆ ತಿಳಿದಿತ್ತು. ಗುಟ್ಟಾಗಿ ಕಣ್ಣಿಟ್ಟಿದ್ದ ವಿದ್ಯುನ್ಮಾನ ನಿಯಂತ್ರಿತ ತಂತಿಗಳು ನಾನು ಹೇಡಿ ಎಂದು ತೋರಿಸಿಕೊಡುವುದು ನನಗೆ ಇಷ್ಟವಿರಲಿಲ್ಲ; ಆಕಾಶ ಎಂದು ಕರೆಯುವ ನಿಗೂಢವಾದ ಅವ್ಯಕ್ತದ ಕತ್ತಲು ಮತ್ತು ನೀರವತೆಗೆ ಹೆದರಿದೆ ಎಂದು ತೋರಿಸಿಕೊಡುವುದು ಇಷ್ಟವಿರಲಿಲ್ಲ! ಮತ್ತೆ ಮತ್ತೆ ನನಗೆ ನಾನೇ ಹೇಳಿಕೊಂಡೆ, "ಉಹುಂ, ನೀನು ಧ್ರುವ ಮಾತ್ರವಲ್ಲ, ಗಗನಯಾತ್ರಿಯಾಗಲೂ ಪರೀಕ್ಷೆಯನ್ನೆದುರಿಸುತ್ತಿರುವ ಆಧುನಿಕ ಮಾನವನೂ ಹೌದು!"

ಕೊನೆಯೇ ಇಲ್ಲದ ಆ ರಾತ್ರಿ ನಾನು ನನ್ನ ಪೀಠವನ್ನು ಬಿಟ್ಟಿದ್ದು ಎರಡೇ ಬಾರಿ. ಒಮ್ಮೆ ನನಗೆ ಹಸಿವಾದಾಗ ಪೆಟ್ಟಿಗೆಯಲ್ಲಿ ತಡಕಾಡಿದೆ, 'ಹಾಲು' ಎಂದು ಹೆಸರಿದ್ದ ಸೀಸೆ ಸಿಕ್ಕಿತು. ಬ್ರೆಯ್ಲ್ ಲಿಪಿಯನ್ನು ಓದುವ ಕುರುಡನಂತೆ ನಾನು ಅಕ್ಷರಗಳನ್ನು ಗುರುತು ಹಿಡಿದು ಅರ್ಥವನ್ನು ಸ್ಪಷ್ಟವಾಗಿ ಅರಿತುಕೊಂಡೆ. ಅದೇ ನನಗೆ ಆಹಾರ. ಹಾಲನ್ನು ಕುಡಿದೆ.

ಎರಡನೆ ಬಾರಿ ಉಚ್ಚೆ ಹೊಯ್ಯಲು ಎದ್ದೆ. ಅದಕ್ಕಾಗಿಯೇ ಒಂದು ಮಡಕೆಯನ್ನಿಟ್ಟಿದ್ದುದು ಗೊತ್ತಾಯಿತು.

ಆ ಪಿಶಾಚಿ ಪೆಟ್ಟಿಗೆ ಯಾವಾಗ ತೆರೆದುಕೊಂಡಿತೋ, ಡಾಕ್ಟರ್ ಯಾವಾಗ ಕಾಣಿಸಿಕೊಂಡನೋ ನನಗೆ ತಿಳಿಯಲೇ ಇಲ್ಲ, ಹೊರಗಡೆಯ ಬೆಳಕು ಮತ್ತು ಶಬ್ದಗಳಿಂದ ನನಗೆ ನಾನು ಮತ್ತೆ ಭೂಮಿಯ ಮೇಲಿದ್ದೇನೆ ಎಂದು ಥಟ್ಟನೆ ತಿಳಿಯಿತು, ನಾನು ಖುಷಿಯಾಗಿ, "ಖಂಡಿತವಾಗಿಯೂ ನಾನು ಭೂಮಿಯನ್ನು ಬಿಟ್ಟು ಒಂದು ಸಾವಿರ ವರ್ಷಗಳಾಯಿತು!" ಎಂದು ಕೂಗಿಕೊಂಡೆ.

ನನ್ನ ಮಾತನ್ನು ತಡೆಯುತ್ತ ವೈದ್ಯ, "ನಲವತ್ತೆಂಟು ಗಂಟೆಗಳಷ್ಟೆ! ಆದರೂ, ಪ್ರಾರಂಭ ಚೆನ್ನಾಗಿದೆ..." ಎಂದ.

ಅದರ ನಂತರ ವೈದ್ಯನು ನನ್ನನ್ನು ಪಿಶಾಚಿಗೆ ಒಪ್ಪಿಸಿದ್ದಷ್ಟೇ ಅಲ್ಲ ಸೈತಾನನನ್ನೂ ಜೊತೆಗಿಟ್ಟ. ಎರಡನೆ ಪೆಟ್ಟಿಗೆಯಲ್ಲಿ ಸೈತಾನನಿಗೆ ದೊಡ್ಡ ತೋಳು, ವೈದ್ಯ ನನ್ನನ್ನು ಅದಕ್ಕೆ ಕಟ್ಟಿದ. ದೆವ್ವದ ಚಕ್ರಕ್ಕೆ ನೆಟ್ಟಿದ್ದ, ಒಂದು ಚಿಕ್ಕ ಮಂಚದಷ್ಟು ಅಗಲವಿದ್ದ ತೊಲೆಯ ಮೇಲೆ ದೊಪ್ಪನೆ ಬಿದ್ದೆ. ಚಕ್ರವು ಉಸಿರುಸಿಕ್ಕಿಹಾಕಿಕೊಳ್ಳುವ ವೇಗದಲ್ಲಿ ತಿರುಗಿತು. ತೊಲೆಯನ್ನು ವಾಯು ಯಂತ್ರದಂತೆ ಗಿರ್ರನೆ ತಿರುಗಿಸಿತು. ಆ ಅನುಭವವು, ಒಬ್ಬ ಮನುಷ್ಯನ ಸೊಂಟಕ್ಕೆ ಉದ್ದವಾದ ಗಟ್ಟಿಯಾದ ಹಗ್ಗವನ್ನು ಕಟ್ಟಿ, ಅವನು ದಯೆತೋರಿಸಿ ಎಂದು ಕೂಗಿ ಕೊಳ್ಳುವವರೆಗೆ ಗಿರ್ರನೆ ಗಾಳಿಯಲ್ಲಿ ತಿರುಗಿಸಿದ ಹಾಗಿತ್ತು!

ನನ್ನನ್ನು ಮೇಲಕ್ಕೆಸೆಯುವಂತೆ ಸೈತಾನನಿಗೆ ಅಪ್ಪಣೆ ಮಾಡುವ ಮೊದಲು ವೈದ್ಯ ನನಗೆ ಒಂದು ಉಪಾಯವನ್ನು ಹೇಳಿಕೊಟ್ಟ.

"ನೋಡಿಲ್ಲಿ, ಇಲ್ಲೊಂದು ಸ್ವಿಚ್ಚಿದೆ!" ಆತ ಹೇಳಿದ. "ಅದನ್ನು ಒತ್ತಿದರೆ, ದೀಪ ತಾನಾಗಿಯೇ ಆರಿ ಹತ್ತಿಕೊಳ್ಳುತ್ತದೆ. ಸೈತ್ಯಾನನ ತೋಳಿನಲ್ಲಿ ನೀನು ಸುರಕ್ಷಿತವಾಗಿದ್ದೀ, ಈ ಕಂಕರಾಟಣವನ್ನ ತಡೆದುಕೊಳ್ಳಬಲ್ಲೆ ಎನ್ನಿಸಿದಷ್ಟು ಹೊತ್ತು ಸ್ವಿಚ್ಚನ್ನು ಒತ್ತುತ್ತಿರು. ನಿನಗೆ ಇನ್ನೂ ವೇಗ ಬೇಕು, ಇನ್ನೂ ಖುಷಿ ಬೇಕು ಎಂದು ನಮಗೆ ಗೊತ್ತಾಗುತ್ತದೆ! ದೀಪ ಆರದೆ ಹೋದರೆ ನಿನಗೆ ಸಾಕಾಯಿತು ಅಂದುಕೊಳ್ಳುತ್ತೇವೆ...ಅಷ್ಟೆ!"

ವೈದ್ಯನ ಧ್ವನಿ ನಿಧಾನವಾಗಿ ನಿಂತುಹೋಯಿತು, ಎಲ್ಲೋ ಯಂತ್ರವೊಂದರ ಮೆಲು ಶಬ್ದ ಪ್ರಾರಂಭ ವಾಯಿತು. ಇದ್ದಕ್ಕಿದ್ದಂತೆ ಏನೋ ನನ್ನ ಹೃದಯದ ಕಡೆಗೆ ಹಾರಿದ್ದು ಗೊತ್ತಾಯಿತು. ಅದು ಸೈತಾನನಲ್ಲದೆ ಬೇರೆ ಯಾರೂ ಆಗಿರಲು ಸಾಧ್ಯವಿರಲಿಲ್ಲ! ಅನಂತರ, ನನ್ನ ಹೃದಯವನ್ನೆ ಕಿವುಚುತ್ತಿರುವಂತೆ ಅನುಭವವಾಯಿತು. ರಕ್ತ ನನ್ನ ತಲೆಗೆ ನುಗ್ಗಿತ್ತು; ರಕ್ತ ಕುದಿಯುತ್ತಿರುವ ಸೀಸದಂತೆ ಭಾರವಾಗಿ ಬಿಸಿಬಿಸಿಯಾಗಿರುವಂತೆ ಎನ್ನಿಸಿತು! ಆಮೇಲೆ ನಿಜವಾಗಿ ಒಂದು ಆನೆಯೇ ನನ್ನ ಎದೆಯ ಮೇಲೆ ಕುಳಿತುಬಿಟ್ಟಿದೆ ಎಂದುಕೊಂಡೆ.

ಅತ್ಯಂತ ಯಾತನೆಯ ನೋವು ಮತ್ತು ಹಿಂಸೆಗಳನ್ನು ಅನುಭವಿಸಿದ್ದೆ. ಆದರೂ ಕೈಯಲ್ಲಿದ್ದ ಸ್ವಿಚ್ಚನ್ನು ಒತ್ತುತ್ತಲೇ ಇದ್ದೆ. ಕಾಲ, ಸ್ಥಳ ಎಲ್ಲ ಲೆಖ್ಖಾಚಾರವನ್ನೂ ಕಳೆದುಕೊಂಡು ಬಿಟ್ಟಿದ್ದೆ.

ಕಡೆಗೂ ಸೈತಾನನ ಚಕ್ರ ನಿಂತಿತು. ವೈದ್ಯ ಒಳಗೆ ಇಣಿಕಿ ನೋಡಿದ.

"ಹಲೋ" ಕರ್ಕಶಧ್ವನಿಯಲ್ಲಿ ಕೇಳಿದ "ಇನ್ನೂ ಅಲ್ಲೇ ಇದ್ದೀಯೇನು?"

ಮುಂದುವರೆದು ಹೇಳಿದ "ಗಂಟೆಗೆ ಎಪ್ಪತ್ತು ಸಾವಿರ ಮೈಲು ವೇಗದಲ್ಲಿ ಹೋಗುತ್ತಿದ್ದೆ - ನೇರ ರೇಖೆಯಲ್ಲಿ."

ನನಗೆ ಪ್ರಾಣಾಯಾಮವನ್ನು ಹೇಳಿಕೊಟ್ಟ ಗುರುವನ್ನು ನಾನು ಸ್ಮರಿಸುತ್ತಿರುವಾಗಲೇ ವೈದ್ಯ ನನ್ನನ್ನು ಮುಂದಿನ ಸವಾಲಿಗೆ ಕರೆದುಕೊಂಡು ಹೋದ - ಮೂರನೆಯ ಪೆಟ್ಟಿಗೆಗೆ.

ಈ ಪೆಟ್ಟಿಗೆಯ ಹೆಸರು - ಜತುಗೃಹ, ಅರಗಿನ ಮನೆ. ಹೆಸರು ಕೇಳುತ್ತಲೇ ನಾನು ಬೆಚ್ಚಿಬಿದ್ದೆ. ಪುರಾಣದಲ್ಲಿ ಪಾಂಡವರನ್ನು ಅವರ ದುಷ್ಟ ದಾಯಾದಿಗಳಾದ ಕೌರವರು ಅರಗಿನ ಮನೆಯಲ್ಲಿಟ್ಟು ಮನೆಗೆ ಬೆಂಕಿ ಹೊತ್ತಿಸಿ ಬಿಟ್ಟರು. ವೈದ್ಯ ನನ್ನನ್ನು ಪೆಟ್ಟಿಗೆಯೊಳಕ್ಕೆ ನೂಕಿ ಬಾಗಿಲನ್ನು ಹಾಕಿಬಿಟ್ಟಾಗ ನನಗೆ ಅಂಥದೇ ವಿಧಿ ಎಂದು ಕಾದೆ.

ನನ್ನ ಭಯ ನಿಜವಾಯಿತು. ಪೆಟ್ಟಿಗೆಯಲ್ಲಿ ಶಾಖ ಹೆಚ್ಚುತ್ತ ಹೋಯಿತು. ಆದರೆ ನಾನು ಅಲ್ಲಾಡದೆ ಇರಬೇಕಾಗಿತ್ತು - ಮಿಸುಕಾಡುವಂತಿರಲಿಲ್ಲ.

ಶಾಖದ ಅಲೆಗಳು ನನ್ನ ಮುಖಕ್ಕೆ ಅಪ್ಪಳಿಸಿದವು. ನಾನು ಆಗ ತಾನೆ ವೃಷ್ಟಿಸ್ನಾನದಿಂದ ಹೊರಕ್ಕೆ ಕಾಲಿಟ್ಟಹಾಗೆ ಬೆವರು ಮೈಯಿಂದ ಇಳಿಯುತ್ತಿತ್ತು. ಸಾಧ್ಯವಾದಷ್ಟು ಪ್ರಶಾಂತನಾಗಿ ಕುಳಿತು ನಾನು, ನಾನೊಬ್ಬ ಗಗನಯಾತ್ರಿ, ನನ್ನ ಗಗನ ನೌಕೆ ಬಹು ಕಾಲದ ಹಾರಾಟದ ನಂತರ ಹಿಂದಿರುಗುತ್ತಿದೆ ಎಂದು ಭಾವಿಸಿಕೊಳ್ಳಲು ಪ್ರಯತ್ನಿಸಿದೆ. ಅದು ಮತ್ತೆ ಭೂಮಿಯ ವಾತಾವರಣವನ್ನು ಪ್ರವೇಶಿಸುತ್ತಿತ್ತು, ಅದರ ಮುಂಭಾಗ ಎದ್ದುಬಿದ್ದು ಗಾಳಿಗೆ ಉಜ್ಜುತ್ತಿತ್ತು. ಈಗ, ಉಜ್ಜಿದ್ದರಿಂದ ಉತ್ಪತ್ತಿಯಾದ ತೀವ್ರ ಶಾಖದಿಂದ ಮುಂಚಾಚಿದ್ದ ಅದರ ಭಾಗ ಹತ್ತಿಕೊಂಡು ಉರಿಯುತ್ತಿತ್ತು. ಇದ್ದಕ್ಕಿದ್ದಂತೆ ಉರಿಯ ನಾಲಿಗೆಗಳು ನನ್ನ ಮುಖವನ್ನು ನೆಕ್ಕುತ್ತಿದ್ದ ಅನುಭವವಾಯಿತು!

ಕಡೆಗೂ ವೈದ್ಯನ ಧ್ವನಿ ಕೇಳಿಸಿತು. "103° ಫಾರ್ನ್ ಹೀಟ್ ಅಷ್ಟೆ! ಹೆಚ್ಚೇನೂ ಅಲ್ಲ, ಮುಂದಿನ ಪರೀಕ್ಷೆಗೆ ಸಿದ್ಧನಾಗು"

ವೈದ್ಯ ನನ್ನನ್ನು ಮುಂದಿನ ಪೆಟ್ಟಿಗೆಗೆ ನೂಕಿದ. ಅದು ನಾದಗೃಹ ಸದ್ದಿನ ಮನೆ.

ಅಂತಹ ಹುಚ್ಚು ಹಿಡಿಸುವ ಶಬ್ದಗಳನ್ನು ಹಿಂದೆಂದೂ ನಾನು ಕೇಳಿರಲಿಲ್ಲ - ಕೂಗಾಟ, ಚೀರಾಟ, ಗದ್ದಲ, ಡಬಾರನೆ ಸದ್ದು - ಎಲ್ಲ ಒಟ್ಟಿಗೆ! ಸಾವಿರ ರೈಲುಗಳ ಎಂಜಿನುಗಳು ಬಹು ಹೊತ್ತು ಗಟ್ಟಿಯಾಗಿ ಶಿಳ್ಳೆ ಹಾಕುತ್ತ ದಬದಬನೆ ಧಾವಿಸುತ್ತಿದ್ದಂತೆ, ಪಿಶಾಚಿಯ ಹಾಡುಗಳನ್ನು ಶಿಳ್ಳೆ ಹಾಕುತ್ತಿದ್ದ ಹಾಗೆ ಕೇಳಿತು.

ಕರುಣಾಳು ವೈದ್ಯ ನನ್ನನ್ನು ಒಳಕ್ಕೆ ನೂಕುವ ಮುನ್ನ ಕಿವಿಗಳಲ್ಲಿ ಸದ್ದನ್ನು ಕಡಮೆಮಾಡಲು ತಡೆಗಳನ್ನಿಟ್ಟಿದ್ದ. ಆದರೂ ಶಬ್ದ ನಿರ್ದಯವಾಗಿ ನನ್ನ ಮೇಲೆ ಅಪ್ಪಳಿಸಿತು. ನನಗೆ ನಡುಕ ಬಂದಿತು. ವಿದ್ಯುತ್ ಅಗ್ಗಿಷ್ಟಿಕೆಯ ತಂತಿಗಳಂತೆ ನನ್ನ ಕೂದಲು ಕಾದು ಕೆಂಪಾಗುತ್ತಿದೆ ಎನ್ನಿಸಿತು. ಉಡಾವಣೆ ವೇದಿಕೆಯಿಂದ ಆಗತಾನೆ ಹಾರಿಸಿದ ರಾಕೆಟ್‌ನಲ್ಲಿ ನಾನಿದ್ದೇನೆ ಎನ್ನಿಸುವಷ್ಟುಮಟ್ಟಿಗೆ ಸದ್ದಿನ ಪ್ರಮಾಣ ಹೆಚ್ಚುತ್ತ ಹೋಯಿತು.

ವೈದ್ಯ ನನ್ನ ಪೆಟ್ಟಿಗೆಯೊಳಕ್ಕೆ ಬಂದುದನ್ನು ನಾನು ಗಮನಿಸಲೇ ಇಲ್ಲ. "ಮುಂದಿನ ಪೆಟ್ಟಿಗೆಗೆ ಸಿದ್ಧವಾಗಿ ಇದ್ದೀಯ?" ಎಂದು ಆತ ಕೇಳಿದ.

ನಾನು ನಿಧಾನವಾಗಿ ಮೇಲಕ್ಕೆದ್ದೆ. ನಾನು ನನ್ನ ಕುರ್ಚಿಯ ಮೇಲೆ, ಅಗ್ನಿಯ ಮಧ್ಯೆ ತಪಸ್ಸು ಮಾಡುವ ಋಷಿಯ ಹಾಗೆ ಕುಳಿತಿದ್ದೆ.

ನನ್ನ ಮುಂದಿನ ಎರಡು ಪರೀಕ್ಷೆಗಳು ಇನ್ನೂ ವಿಚಿತ್ರವಾದ ಪೆಟ್ಟಿಗೆಗಳಲ್ಲಿ ನಡೆದವು. ಐದನೆ ಪೆಟ್ಟಿಗೆಯ ಹೆಸರು ನೃತ್ಯಗೃಹ ಎಂದು ವೈದ್ಯ ಹೇಳಿದ! ಒಳಕ್ಕೆ ಹೋದದ್ದೆ ತಡ ನನ್ನನ್ನು ಕೆಳಕ್ಕೆ ಬೀಳಿಸಿತು. ನಾನು ಇನ್ನೂ ಎದ್ದು ನಿಂತೇ ಇರಲಿಲ್ಲ, ಮತ್ತೆ ನೆಲದಿಂದ ಎಳೆದು ಹಾಕಿತು. ಅನಂತರ ಪೆಟ್ಟಿಗೆಯು ಗಿರ್ರನೆ ತಿರುಗಲು ಪ್ರಾರಂಭಿಸಿತು. ಆಗಾಗ ಪಲ್ಟಿ ಹೊಡೆಯುತ್ತಿತ್ತು ಬೇರೆ! ಪೆಟ್ಟಿಗೆ ಕುಣಿದಂತೆ ನನ್ನ ದೇಹವೂ ಅದರೊಂದಿಗೇ ಕುಣಿಯಿತು. ಕಡೆಗೆ ಅದು ನಿಧಾನವಾಯಿತು. ಆದರೂ ನಾನು ನೆಲದ ಮೇಲೆ ನನ್ನ ಪಾದಗಳನ್ನು ಗಟ್ಟಿಯಾಗಿ ಊರಿದ್ದೆ. ನನ್ನ ತಲೆ ಸುತ್ತುತ್ತಿರಲಿಲ್ಲ. ಇಷ್ಟೆಲ್ಲಾ ಆಗಿದ್ದರೂ ಬುದ್ಧಿ ತಿಳಿಯಾಗಿತ್ತು. ಗಗನಯಾತ್ರಿಯಂತೆ ನಾನು ತಲೆಯನ್ನು ನೆಟ್ಟಗಿಟ್ಟುಕೊಳ್ಳಬೇಕಾಗಿತ್ತು, ಇಲ್ಲವಾದರೆ ನಾನು ಗಗನನೌಕೆಯನ್ನು ನಡೆಸುತ್ತಿದ್ದು ದಿಕ್ಕಿನ ಅರಿವು ತಪ್ಪಿದ್ದರೆ ಗಗನನೌಕೆಯನ್ನು ತಪ್ಪು ಪಥಕ್ಕೆ ತಿರುಗಿಸಿಬಿಡಬಹುದಾಗಿತ್ತು.

ಅದರ ಮುಂದಿನ ಪೆಟ್ಟಿಗೆ ಇನ್ನೂ ವಿಚಿತ್ರ. ನಾನು ಒಳಕ್ಕೆ ಹೋಗುತ್ತಲೇ ಅದು ನನ್ನ ತೂಕವನ್ನೆಲ್ಲ ಎಳೆದುಕೊಂಡು ಬಿಟ್ಟಿತು. ಆದರಿಂದಲೇ ವೈದ್ಯ ಅದನ್ನು ಭಾರ ರಾಹಿತ್ಯದ ಪೆಟ್ಟಿಗೆ ಎಂದು ಕರೆದಿದ್ದ!

ಅದೊಂದು ಬಹು ವಿಲಕ್ಷಣ ಅನುಭವ. ಒಂದು ಕ್ಷಣದ ನಂತರ ನನಗೆ ಹೊಟ್ಟೆ ತೊಳಸಿತು. ಆದರೂ ನಾನು ಆಕಾಶನೌಕೆಯಲ್ಲಿದ್ದೇನೆಂದು ಕಲ್ಪಿಸಿಕೊಂಡೆ. ಆಕಾಶದಲ್ಲಿ, ಮನುಷ್ಯ ತೂಕವೇ ಇಲ್ಲದ ಜಗತ್ತಿನಲ್ಲಿ ವಾಸಿಸಬೇಕು. ಅಲ್ಲಿ ಅವನ ದೇಹ ದೇಹವೇ ಅಲ್ಲ!

ಪೆಟ್ಟಿಗೆ ತೆರೆಯಿತು. ವೈದ್ಯನು ನಾನು ಪ್ರಾಣಾಯಾಮದ ಆಸನದಲ್ಲಿ ಕುಳಿತಿದ್ದುದನ್ನು ಕಂಡ.

ಸ್ವರ್ಗಕ್ಕೆ ಉಳಿದಿದ್ದುದು ಇನ್ನೊಂದೇ ಮೆಟ್ಟಿಲು. ಬಹು ಕಷ್ಟದ್ದು, ಆದರೆ ಆಕಾಶದಲ್ಲಿ ಇರುವಂತಹ ಅನುಭವ.

ವೈದ್ಯ ನನಗೆ ಒಂದು ಗಗನದ ಉಡುಪು ಮತ್ತು ಮುಖವಾಡವನ್ನು ಧರಿಸುವಂತೆ ಹೇಳಿದ. ನಾನು ವಿಚಿತ್ರವಾಗಿ ಕಂಡಿರಬೇಕು, ಚಿತ್ರಗಳಲ್ಲಿ ಗಗನ ಯಾತ್ರಿಗಳು ಕಾಣುವಷ್ಟು ವಿಚಿತ್ರವಾಗಿ.

ವೈದ್ಯ ನನ್ನನ್ನು ಆಮ್ಲಜನಕದ ಡೇರೆಯಲ್ಲಿಟ್ಟು, "ಆಳವಾಗಿ ಉಸಿರೆಳೆದುಕೊ, ಇದಕ್ಕೆ ನಿನಗೆ ಆಮ್ಲಜನಕ ಬೇಕಾಗುತ್ತದೆ!" ಎಂದು ಹೇಳಿದ.

ಅನಂತರ ಆತ ಒಂದು ಚೀಲವನ್ನು ನನ್ನ ಬೆನ್ನ ಮೇಲೆ ಇಳಿ ಬಿಟ್ಟ, ಕೆಲವು ಕೊಳವೆಗಳು ಮತ್ತು

ತಿರುವು ತೋಳಿಗಳನ್ನು ಹಾಗೆ ಹೀಗೆ ಆಡಿಸಿದ, ಅನಂತರ ಹೇಳಿದ, "ಈಗ ಒಳಕ್ಕೆ ಹೋಗು, ಗಾಳಿ ಇಲ್ಲದ ಆಕಾಶದಲ್ಲಿ ಎಷ್ಟು ಎತ್ತರ ಏರಬಲ್ಲೆಯೋ ನೋಡೋಣ!"

ಭಯಗೊಳಿಸುವ ಪೆಟ್ಟಿಗೆಯನ್ನು ಹೊಕ್ಕೆ. ಅದರಲ್ಲಿ ನಾನು ಉಸಿರಾಡಲು ಒಂದೇ ಒಂದು ಘನ ಸೆಂಟಿಮೀಟರಿನಷ್ಟು ಗಾಳಿ ಇರಲಿಲ್ಲ ಎಂದು ನನಗೆ ತಿಳಿದಿತ್ತು.

ಮರುಕ್ಷಣವೇ ಮರ್ಮರದ ಶಬ್ದ ಕೇಳಿಸಿತು. ವ್ಯಾಕ್ಯೂಂಪಂಪ್ ಒಂದು ನಿಧಾನವಾಗಿ ನನ್ನ ಪೆಟ್ಟಿಗೆಯಿಂದ ಗಾಳಿಯನ್ನು ಎಳೆದುಕೊಳ್ಳಲು ಪ್ರಾರಂಭಿಸಿತ್ತು. ನನ್ನ ಅಂತರಿಕ್ಷ ಉಡುಪು ಊದಿಕೊಳ್ಳಲು ಪ್ರಾರಂಭಿಸಿತು. ವಾಸ್ತವವಾಗಿ ದೊಡ್ಡದಾದ ಅಂತರಿಕ್ಷ ಉಡುಪು ನನ್ನ ದೇಹವನ್ನು ರಕ್ಷಿಸುತ್ತಿತ್ತು!

ನನ್ನ ಮುಖವಾಡದ ಮೂಲಕವೇ ಎರಡು ಅಂಶಗಳನ್ನು ಗಮನಿಸಿದೆ. ಗಡಿಯಾರದಂತಹ ಮುಖಫಲಕ ಒಂದನ್ನು ನೋಡಿದೆ, ಅದಕ್ಕೆ ಕೆಲವು ಅಂಕಿಗಳನ್ನು ತೋರಿಸುವ ಒಂದು ಮುಳ್ಳು. ನಾನು ನೋಡುತ್ತಿದ್ದ ಹಾಗೆಯೇ ಮುಳ್ಳು ಚಲಿಸಿತು - ಸುಮಾರು ಹತ್ತು ಸಾವಿರದಿಂದ ಇಪ್ಪತ್ತಕ್ಕೆ! ಇದ್ದಕ್ಕಿದ್ದ ಹಾಗೆ ತೀವ್ರವಾಗಿ ಏರಿ ಮೂವತ್ತಕ್ಕೆ ಹಾರಿತು.

ಗಡಿಯಾರದ ಮುಳ್ಳು ತೋರಿಸುತ್ತಿದ್ದುದು ಸಮಯವನ್ನಲ್ಲ, ಎತ್ತರವನ್ನು

ಅನಂತರ ಮುಖವಾಡದ ಹಿಂದಿದ್ದಂತೆಯೇ ನನ್ನ ಕಣ್ಣುಗಳು ನನ್ನ ಪೀಠದ ಪಕ್ಕದಲ್ಲಿ ಮತ್ತೊಂದು ತಮಾಷೆಯಾದ ವಸ್ತುವನ್ನು ಕಂಡವು. ನೀರು ತುಂಬಿದ ತೋಟದಷ್ಟೇ ನಿರಪಾಯವಾಗಿ ಅದು ಕಂಡಿತು. ಗಡಿಯಾರದ ಮುಳ್ಳು ಒಂದೇ ರೀತಿಯಾಗಿ ಮುಖಫಲಕದಲ್ಲಿ ಮೇಲಕ್ಕೆ ಸಾಗಿತು. ಇದ್ದಕ್ಕಿದ್ದಂತೆ ಲೋಟದಲ್ಲಿನ ನೀರು ಕುದಿಯಲು ಪ್ರಾರಂಭವಾದದ್ದನ್ನು ಕಂಡು ನನಗೆ ಬಹಳ ಆಶ್ಚರ್ಯವಾಯಿತು. ಅನಂತರ ಆವಿಯಾಗಲು ಪ್ರಾರಂಭಿಸಿತು, ಆವಿಯು ಮೋಡವಾಯಿತು.

ಗಡಿಯಾರವನ್ನು ನೋಡಿದೆ. ಮುಳ್ಳು ಅರವತ್ತು ಸಾವಿರವನ್ನು ದಾಟುವುದರಲ್ಲಿತ್ತು.

ನಾನು ನಿಜವಾಗಿಯೂ ಸಮುದ್ರಮಟ್ಟದಿಂದ ಅರವತ್ತು ಸಾವಿರ ಅಡಿ ಮೇಲಿದ್ದೇನೆ?

ಆದರೆ ನನ್ನ ಪೆಟ್ಟಿಗೆ ಭೂಮಿಯಿಂದ ಒಂದು ಅಡಿಯೂ ಮೇಲೇರಿರಲಿಲ್ಲ, ಅದೆಲ್ಲ, ಇಷ್ಟು ಕಾಲವೂ ನನ್ನ ಕಿವಿಯಲ್ಲಿ ಮರ್ಮರ ಶಬ್ದ ಮಾಡುತ್ತಿದ್ದ ವ್ಯಾಕ್ಯೂಂ ಪಂಪಿನ ಕೆಲಸ. ನನ್ನ ಅಂತರಿಕ್ಷ ಉಡುಪು ನನ್ನ ಸುತ್ತಲಿನ ನಿರ್ವಾತದ ಪ್ರಮಾಣವನ್ನು ತೋರಿಸುತ್ತಿತ್ತು. ಆ ನಿರ್ವಾತದಲ್ಲಿ ನೀರು ಆವಿಯಾಗಿ ಹೋದದ್ದು ಆಶ್ಚರ್ಯವೇನಲ್ಲ, ಹೀಗೆ ಸಾಂದ್ರತೆ ಕಡಮೆಯಾದ ವಾತಾವರಣದಲ್ಲಿ ನೀರು ತನ್ನ ದ್ರವರೂಪವನ್ನು ಉಳಿಸಿ ಕೊಳ್ಳಲಾರದು.

ಮುಳ್ಳು ಎಪ್ಪತ್ತೈದನ್ನು ಮುಟ್ಟಿತು! ಎಂದರೆ, ನಾನು ಸಮುದ್ರ ಮಟ್ಟಕ್ಕಿಂತ ಎಪ್ಪತ್ತೈದು ಸಾವಿರ ಅಡಿ ಎತ್ತರದಲ್ಲಿದ್ದ ಹಾಗೆಯೇ! ಆ ಯೋಚನೆಯಿಂದಲೇ ನನ್ನ ತಲೆ ಗಿರ್ರನೆ ತಿರುಗಿತು.

ಇದ್ದಕ್ಕಿದ್ದಂತೆ ನನಗೊಂದು ತುಂಟ ಆಲೋಚನೆ ಬಂದಿತು. ಒಂದಿಷ್ಟು ತಮಾಷೆ ಮಾಡಬೇಕೆನ್ನಿಸಿತು. ನನ್ನ ಬಲಗೈಯ ಕೈಚೀಲವನ್ನು ತೆಗೆದುಬಿಟ್ಟೆ. ಆದರೆ ಅದರಿಂದ ಏನಾಯಿತೆಂದು ಕಂಡಾಗ ಗಡಗಡ ನಡುಗಿಹೋದೆ.

ನನ್ನ ಕೈ ಕುಂಬಳಕಾಯಿಯಂತೆ ಊದಿಬಿಟ್ಟಿತು! ಗಾಜಿನ ಲೋಟದಲ್ಲಿನ ನೀರಿನಂತೆ, ನನ್ನ ರಕ್ತವೂ ರಕ್ತನಾಳಗಳನ್ನು ಒಡೆದುಕೊಂಡು ಹೊರಕ್ಕೆ ನುಗ್ಗಿ ಆವಿಯಾಗಲು ಪ್ರಯತ್ನಪಡುತ್ತಿದೆ ಎನ್ನಿಸಿತು.

ಅದದ್ದನ್ನು ವೈದ್ಯ ನೋಡಿರಬೇಕು. ಸುಯ್ ಎಂದು ಶಬ್ದ ಮಾಡುತ್ತ ಗಾಳಿ ನನ್ನ ಪೆಟ್ಟಿಗೆಯೊಳಕ್ಕೆ ನುಗ್ಗಿತು. ವ್ಯಾಕ್ಯೂಂ ಪಂಪ್ ನಿಶ್ಶಬ್ದವಾಯಿತು. ನನ್ನ ಅಂತರಿಕ್ಷ ಉಡುಪು ಮುದುಡಿಕೊಂಡಿತು. ನನ್ನ ಕೈ ಸಾಮಾನ್ಯಸ್ಥಿತಿಗೆ ಮರಳಿತು. ಕೈ ಉಳಿಯಿತು. ನನ್ನ ಪ್ರಾಣವೂ ಉಳಿಯಿತು.

ನನ್ನ ಬಂಧನಗಳಿಂದ ಸಂಪೂರ್ಣವಾಗಿ ಮುಕ್ತನಾದ ಮೇಲೆ ವೈದ್ಯ ನನ್ನನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡ. ಅವನ ಗದರಿಕೆಯನ್ನು ನಾನು ನಗುನಗುತ್ತಲೇ ಸ್ವೀಕರಿಸಿದೆ, ಅನಂತರ, "ಅಂತರಿಕ್ಷ ಉಡುಪಿಲ್ಲದೆ ಸ್ವರ್ಗಕ್ಕೆ ಹೋದ ಒಬ್ಬ ಭಾರತೀಯ ಯಾರು ನಿಮಗೆ ಗೊತ್ತೆ?" ಎಂದು ಕೇಳಿದೆ.

ವೈದ್ಯ ನನ್ನನ್ನೆ ದೃಷ್ಟಿಸಿ ನೋಡಿದ. "ಯುಧಿಷ್ಠಿರ! ಪಾಂಡವರಲ್ಲಿ ಮೊದಲನೆಯವನು!" ನಾನೆಂದೆ, ನನ್ನ ಎದೆಯನ್ನು ಹೆಮ್ಮೆಯಿಂದ ಮುಂದೆ ಚಾಚಿದೆ.

ಈ ಮಾತುಗಳನ್ನು ವೈದ್ಯ ಕೇಳಿದಾಗ ಅವನ ಕಣ್ಣು ಮಿಂಚಿತು, ಮೃದುಮನಸ್ಸಿನಿಂದ ನನ್ನ ಕಡೆ ಕಣ್ಣು ಮಿಟಕಿಸುತ್ತ ಅವನೆಂದ, "ಭೇಷ್, ಹುಡುಗ, ಚೆನ್ನಾಗಿ ನಡೆದುಕೊಂಡೆ! ನಿನ್ನ ಆಯ್ಕೆಯಾಗಿದೆ - ಯುಧಿಷ್ಠಿರನ ಹಾಗೆ ನೀನೂ ಪರೀಕ್ಷೆಗಳಲ್ಲಿ ಗೆದ್ದೆ."

ಈ ಸುದ್ದಿಯನ್ನು ಕೇಳಿ ನಿಮಗೆ ಸಂತಸವಾಗಬಹುದು - ನೂರಾರು ಮಂದಿ ಅಭ್ಯರ್ಥಿಗಳಲ್ಲಿ ಆರಿಸಿದ್ದು ಮೂವರನ್ನೆ, ಅವರಲ್ಲಿ ಯಾರೂ ದೈತ್ಯರಲ್ಲ.

"ದೈತ್ಯರಿಗೇನಾಯಿತು?" ನಾನು ವಿಚಾರಿಸಿದೆ.

ವೈದ್ಯ ತಾತ್ಸಾರದಿಂದ ಹೇಳಿದ, "ನಮಗೆ ದೈತ್ಯರು ಬೇಡ! ನಿನ್ನಂತಹ ಸಾಮಾನ್ಯ ಯುವಕರಿಗಾಗಿ ನಾವು ಹುಡುಕುತ್ತೇವೆ."

ಹೌದು, ನಾನೊಬ್ಬ ಸಾಮಾನ್ಯ ಮನುಷ್ಯ ಬಹು ಸಾಮಾನ್ಯ ಮನುಷ್ಯ ಆದರೆ ನಾನು ಮನೆಗೆ ಬಂದು ನಡೆದದ್ದನ್ನೆಲ್ಲ ನನ್ನ ಗುರುವಿಗೆ ಹೇಳಿದಾಗ ಅವರು ಮುಗುಳ್ನಗೆ ನಕ್ಕು ಹೇಳಿದರು. "ಇದೇನೂ ಹೊಸದಲ್ಲ, ಮಗು! ನಿನ್ನ ದೇಹ, ಮನಸ್ಸು, ಆತ್ಮ ಇವನ್ನು ಚೆನ್ನಾಗಿ ತಿಳಿದುಕೊ. ಜಗತ್ತಿಗೆ ಸಾಮಾನ್ಯ ಮನುಷ್ಯರೆಂದರೆ ಬೇಸರ. ಅದಕ್ಕೀಗ ಅತಿ ಮಾನವರು ಬೇಕಾಗಿದ್ದಾರೆ."

# ಬಮ್ ಬಹಾದುರ್

## ಗುರುಭಕ್ಷ್ ಸಿಂಗ್

ಬಮ್ ಬಹಾದುರ್‌ನ ಮಾವುತ ಮತಾದಿನ್ ರಾಜನಿಗೆ ದೂರುಕೊಟ್ಟ, ಆ ಆನೆಯ ಮನಸ್ವೀ ನಡೆಯುವುದು ದಿನದಿನಕ್ಕೆ ಹೆಚ್ಚಾಗುತ್ತಿದೆ ಎಂದು. ವೈದ್ಯರು ಅಪ್ಪಣೆ ಮಾಡಿದಂತೆ, ಅದನ್ನು ಕಾಯಿಲೆಯಾಗಿದ್ದ ಅದರ ಸಂಗಾತಿಯಿಂದ ದೂರ ಇಟ್ಟಿದ್ದರು. ಆದರೆ ಪ್ರತಿ ಸಂಜೆ ತನ್ನ ಜೊತೆಗೆ ತನ್ನ ಸಂಗಾತಿಯನ್ನು ಹೊರಕ್ಕೆ ಕರೆದೊಯ್ಯದಿದ್ದರೆ ಬಮ್ ಬಹಾದುರ್ ಕೂಗಿ ಘೀಳಿಟ್ಟು ರಾದ್ಧಾಂತ ಮಾಡುತ್ತಿತ್ತು. ಸಂಗಾತಿಯನ್ನು ಜೊತೆಗೆ ಕರೆದೊಯ್ದರೆ ಆ ಹೆಣ್ಣಾನೆಯನ್ನು ಗೋಳಾಡಿಸುತ್ತಿತ್ತು. ತನ್ನ ಸೊಂಡಿಲು ಆ ಹೆಣ್ಣಾನೆಯ ಬೆನ್ನಿನ ಮೇಲಿಲ್ಲದಿದ್ದರೆ ಹೊರಕ್ಕೆ ಹೆಜ್ಜೆಯನ್ನೆ ಇಡುತ್ತಿರಲಿಲ್ಲ. ಮತಾದಿನ್ ವಿರೋಧಿಸಿದರೆ ಬಮ್ ಬಹಾದುರ್ ತನ್ನ ಆಕ್ರೋಶವನ್ನು ಬಹು ಸ್ಪಷ್ಟವಾಗಿ ತೋರಿಸುತ್ತಿತ್ತು.

ಮಾಹುತನಿಗೆ ಧೈರ್ಯ ಹೇಳುತ್ತ ರಾಜ ಹೇಳಿದ, "ಚಿಂತಿಸಬೇಡ ಮತಾದಿನ್. ನಮ್ಮ ಬಮ್ ಬಹಾದುರ್‌ಗೆ ಮೆರೆಯಬೇಕೆಂದು ಆಸೆ, ಸ್ವಲ್ಪ ಕಾಲದಿಂದ ಅದಕ್ಕೆ ಅವಕಾಶವಾಗಿಲ್ಲ. ಮುಂದಿನ ಬುಧವಾರ ನಾನು ನನ್ನ ವಧುವನ್ನು ಅವಳ ಮನೆಗೆ ಕಡೆದುಕೊಂಡು ಬರುತ್ತೇನೆ, ಬಮ್ ಬಹಾದುರ್‌ಗೆ ಎಲ್ಲ ಅಲಂಕಾರ ಮಾಡಿ ರೈಲ್ವೆನಿಲ್ದಾಣಕ್ಕೆ ಕರೆದುಕೊಂಡು ಬಾ. ನಾವು ಅದರ ಮೇಲೆ ಕುಳಿತುಕೊಂಡು ಅರಮನೆಗೆ ಬರುತ್ತೇವೆ."

ಬಮ್, ಅದರ ಹೆಸರೇ ಹೇಳುವಂತೆ, ಬಹು ಧೈರ್ಯವಂತ ಆನೆಯಷ್ಟೇ ಅಲ್ಲ, ಅದಕ್ಕೆ ಬಹು ಗಾಂಭೀರ್ಯ. ಈ ಗುಣವನ್ನು ರಾಜ ಬಹುವಾಗಿ ಮೆಚ್ಚಿದ್ದ. ರಾಜ್ಯದ ಪ್ರಭುತ್ವದ ಪ್ರತಿ ಸಮಾರಂಭದಲ್ಲಿ, ಪ್ರತಿ ಮೆರವಣಿಗೆಯಲ್ಲಿ ಬಮ್ ಬಹಾದುರ್ ಎಲ್ಲರ ಕಣ್ಣನ್ನು ಸಳೆಯುವಂತೆ ರಾಜ ಬಹು ಎಚ್ಚರಿಕೆ ವಹಿಸುತ್ತಿದ್ದ. ಸರ್ವಾಲಂಕಾರ ಭೂಷಿತವಾದಾಗ ಅದರ ರೀತಿ ಸೊಗಸಾಗಿರುತ್ತಿತ್ತು. ಅತಿಶ್ರೇಷ್ಠ ತರಬೇತಿ ದೊರೆತ ಸಿಪಾಯಿ ಪೆರೇಡಿನಲ್ಲಿ ನಡೆದುಕೊಳ್ಳುವುದಕ್ಕಿಂತ ಚೆನ್ನಾಗಿ ನಡೆದುಕೊಳ್ಳುತ್ತಿತ್ತು. ಆದರೆ ಅದೇ ಬಮ್ ಬಹಾದುರ್ ಗಜಶಾಲೆಯಲ್ಲಿ ಪೀಡೆಯಾಗಿ ಬಿಡುತ್ತಿತ್ತು. ಮನುಷ್ಯನ ಸ್ವಭಾವವನ್ನು ಅರ್ಥಮಾಡಿಕೊಳ್ಳಲು ಅಸಾಧಾರಣ ಶಕ್ತಿ ಇದ್ದ ಆ ಆನೆ ಗಜಶಾಲೆಯನ್ನು ನೋಡಿಕೊಳ್ಳುವವನು ಸ್ವಲ್ಪ ತಪ್ಪಾಗಿ ಅಥವಾ ಅಪ್ರಾಮಾಣಿಕವಾಗಿ ನಡೆದುಕೊಂಡರೂ ರೊಚ್ಚಿಗೇಳುತ್ತಿತ್ತು.

ಒಮ್ಮೊಮ್ಮೆ ಸೇವಕರು, "ಬಮ್ ಬಹು ಯೋಗ್ಯ ಪ್ರಾಣಿ, ನಿಮಗೇ ಗೊತ್ತಲ್ಲ! ಆದರೆ ಮಾಹುತ ಮೇವಿನಲ್ಲಿ ಕಳ್ಳತನ ಪ್ರಾರಂಭಮಾಡಿದ ಮೇಲೆ ಅವನ ಮೇಲೆ ಅದಕ್ಕೆ ಅಸಮಾಧಾನ ಇದ್ದೆ ಇದೆ. ಹಿಂದೆಲ್ಲ ಬಮ್ ಆನೆಗಳಲ್ಲೆಲ್ಲ ಅತ್ಯಂತ ಸೊಗಸಾದ ಆನೆ ಅಂತ ಹೆಸರು ಮಾಡಿತ್ತು," ಎಂದು ಮಾತನಾಡಿಕೊಳ್ಳುವುದು ಕೇಳಿಬರುತ್ತಿತ್ತು.

ರಾಜನು ತನ್ನ ನವವಧುವಿನೊಂದಿಗೆ ಉದಯಪುರದಿಂದ ಹಿಂದಿರುಗುತ್ತಿದ್ದ. ರೈಲ್ವೆ ನಿಲ್ದಾಣದಲ್ಲೆಲ್ಲ ಹಬ್ಬದ ಸಿಂಗಾರ. ರಸ್ತೆಯಲ್ಲಿ ಕಾರುಗಳ ಉದ್ದ ಸಾಲು. ರಾವುತರು ಚಾಲೂಕಾದ ಸಮವಸ್ತ್ರ ಧರಿಸಿ ತಮ್ಮ ಅರಬ್ಬೀ ಠಾಕಣಗಳ ಮೇಲೆ ನೆಟ್ಟಗೆ ಕುಳಿತಿದ್ದರು. ಬಮ್ ಬಹಾದುರ್ ಸರ್ವಾಭರಣಗಳಿಂದ ಅಲಂಕೃತವಾಗಿ ನಿಂತಿತ್ತು. ಅದರ ಹಿಂಭಾಗದ ಮೇಲೆ ಥಳಥಳ ಹೊಳೆಯುತ್ತಿದ್ದ ಕಿನ್‌ಕಾಪು. ಬಂಗಾರದ ಅಂಬಾರಿಯ ಪುಟ್ಟಪುಟ್ಟ ಬಂಗಾರದ ಗಂಟೆಗಳು ಶಬ್ದಮಾಡುತ್ತಿದ್ದವು. ಅದರ ದಂತಗಳಿಗೆ ಸಹ ಬಂಗಾರದ ಹೊದ್ದಿಕೆ. ತಾನು ಜನಸಂದಣಿಯನ್ನು ಎಷ್ಟೊಂದು ಎತ್ತರದಿಂದ ನೋಡುತ್ತಿದ್ದೇನೆ ಎಂಬ ಅರಿವನ್ನು ಬಹಳ ಇಟ್ಟುಕೊಂಡಿದ್ದ ಮತಾದಿನ್ ಅದರ ಮೇಲೆ ಕುಳಿತಿದ್ದ.

ರಾಜನೂ ಮಹಾರಾಣಿಯೂ ಅಂಬಾರಿಯನ್ನೇರಿದಂತೆ ಜಯಘೋಷ ತುಂಬಿಹೋಯಿತು. ಬಮ್ ಬಹಾದುರ್ ಸೊಂಡಿಲೆತ್ತಿ ನಮಸ್ಕಾರ ಮಾಡಿತು. ಮೆರವಣಿಗೆ ಪ್ರಾರಂಭವಾಯಿತು. ಬಮ್ ಬಹಾದುರ್ ಎಷ್ಟು ರಾಜಗಾಂಭೀರ್ಯದಿಂದ ಹೆಜ್ಜೆ ಹಾಕಿತೆಂದರೆ ಯಾವಾಗಲೂ ಆಕ್ಷೇಪಣೆ ಮಾಡುತ್ತಿದ್ದ ಮತಾದಿನನಿಗೂ ಮೆಚ್ಚಿಕೆಯಾಯಿತು. ಅಮಿತ ಬೆಡಗಿನಿಂದ ಮೃದುವಾಗಿ ಒಲೆದಾಡುತ್ತ ಆನೆಯು ತನ್ನ ಬೆನ್ನಮೇಲೆ ರಾಜ ದಂಪತಿಗಳನ್ನು ಅರಮನೆಯ ಪ್ರವೇಶದಲ್ಲಿ ಕರೆತಂದು ಇಳಿಸಿತು.

ತನ್ನ ವಧುವನ್ನು ಇತರ ಅತಿಥಿಗಳಿಗೆ ಪರಿಚಯ ಮಾಡಿಕೊಡುವ ಮುನ್ನ ರಾಜನು ಆನೆಗೆ, "ಬಮ್ ಬಹಾದುರ್, ಇವಳು ನಿನ್ನ ಹೊಸ ಮಹಾರಾಣಿ. ಅವಳಿಗಾಗಿ ಪ್ರಾಯಶಃ ನನಗಿಂತ ನೀನೇ ಹೆಚ್ಚು ಉತ್ಸುಕತೆಯಿಂದ ಕಾಯುತ್ತಿದ್ದೀಯೆ" ಎಂದು ಹೇಳಿದ. ಬಮ್ ಬಹಾದುರ್ ಸೊಂಡಿಲನ್ನೆತ್ತಿ ಮಹಾರಾಣಿಗೆ ನಮಸ್ಕಾರ ಮಾಡಿತು.

ಲಾವಣ್ಯವತಿಯಾದ ಮಹಾರಾಣಿ ಪ್ರೀತಿ ಆದರಗಳ ಮೂರ್ತಿಯಾಗಿದ್ದಳು. ಅವಳು ಸ್ವಲ್ಪ ಹೆಚ್ಚು ಕಡಮೆ ರಾಜನಷ್ಟು ಎತ್ತರವಿದ್ದಳು. ಅಗಲವಾದ ಹಣೆ, ತುಂಬಿದ ತುಟಿಗಳು, ಕಪ್ಪಾದ, ಹೊಳೆಹೊಳೆಯುವ ಬೊಗಸೆ ಕಣ್ಣುಗಳು, ಕಣ್ಣುಗಳಿಂದ ನೋಡುವುದಷ್ಟೇ ಅಲ್ಲ ಮಾತನಾಡುತ್ತಾಳೆ ಎನ್ನಿಸುತ್ತಿತ್ತು. ಅವಳ ದೃಷ್ಟಿ ಯಾರತ್ತ ಹೊರಳಲಿ ಅವರು ಮಂತ್ರಮುಗ್ಧರಾಗುತ್ತಿದ್ದರು. ಶೃತಿಮಾಡಿಟ್ಟ ಸಿತಾರನ್ನು ಸ್ಪರ್ಶಿಸುತ್ತಲೇ ಮಧುರನಾದವನ್ನು ಚಿಮ್ಮಿಸುವ ಮಿಡಿಯುವ ಸಾಧನದಂತಿದ್ದವು ಆ ಕಣ್ಣುಗಳು.

ಬಮ್ ಬಹಾದುರ್ ಸೌಂದರ್ಯಕ್ಕೆ ನಮಸ್ಕರಿಸಲು ಸೊಂಡಿಲನ್ನೆತ್ತಿತ್ತು.

ರಾಜನೆಂದ, "ಬಮ್ ಬಹಾದುರ್ ನನ್ನ ಆನೆ ಮಾತ್ರವೇ ಅಲ್ಲ, ನನ್ನ ಸ್ನೇಹಿತನೂ ಹೌದು. ನಾವು ಹುಟ್ಟಿದ್ದು ಒಂದೇ ದಿನ."

ಮಹಾರಾಣಿಯು ಬಮ್ ಬಹಾದುರ್‌ನ ನಮಸ್ಕಾರಕ್ಕೆ ಪ್ರತಿಯಾಗಿ ಕೈಗಳನ್ನು ಜೋಡಿಸಿದಳು. ಬಮ್ ಬಹಾದುರ್ ಅವಳ ಕೈಗಳನ್ನು ಹಗುರವಾಗಿ ಸೊಂಡಲಿನ ಕೊನೆಯಿಂದ ಮುಟ್ಟಿತು, ಅನಂತರ ಶಿಸ್ತಿನ ಯೋಧನಂತೆ ನಿಂತು ಮಹಾರಾಣಿಯನ್ನೇ ದಿಟ್ಟಿಸಿತು.

ಬಮ್‌ನ ಹೃದಯದಲ್ಲಿ ತುಂಬಿ ಬರುತ್ತಿದ್ದ ಭಾವವನ್ನು ರಾಜ ಗ್ರಹಿಸಿದ. ಮಹಾರಾಣಿಯತ್ತ ತುಂಟತನದ ಕಡೆಗಣ್ಣೋಟವನ್ನು ಬೀರುತ್ತ ಅವಳ ಕಿವಿಯಲ್ಲಿ ಪಿಸುಮಾತು ಸುರಿದ, "ನಮ್ಮ ಬಮ್‌ಗೆ ಆನೆಯ ದೇಹ. ಆದರೆ ನಲ್ಲನ ಆತ್ಮ. ಆದರದು ಬಹು ಚೆನ್ನಾಗಿ ಗುರುತಿಸುವ ಕಣ್ಣು ಅದರಲ್ಲಿಯೂ ಸುಂದರ ಮುಖಗಳನ್ನು."

ಮಹಾರಾಣಿಯು ತನ್ನ ದೃಷ್ಟಿಯನ್ನು ರಾಜನತ್ತ ಅನಂತರ ಬಮ್‌ನತ್ತ ಹರಿಸಿದಳು. ಅವರಿಬ್ಬರ ಕಣ್ಣುಗಳಲ್ಲಿಯೂ ಒಲವಿನ ಒಂದೇ ಸಂದೇಶವನ್ನು ಗ್ರಹಿಸಿ, ಜಗತ್ತೆ ತನ್ನ ಪಾದದ ಬಳಿ ಇದೆ ಎಂದು ಹಿಗ್ಗಿದಳು.

ಅನೇಕ ದಿನಗಳ ಕಾಲ ರಾಜನು ಮದುವೆಯ ಸಂಭ್ರಮದಲ್ಲಿ ಮುಳುಗಿದ, ವಾರಕ್ಕೊಮ್ಮೆ ಗಜಶಾಲೆಗೆ ಹೋಗುತ್ತಿದ್ದವನು ಹೋಗಲಿಲ್ಲ. ಈ ನಡುವೆ ತನ್ನ ಮಾವುತನ ವಿಷಯದಲ್ಲಿ ಬಮ್ ಬಹಾದುರ್‌ಗೆ ಇದ್ದ ಅಸಮಾಧಾನ ಏರುತ್ತ ಹೋಯಿತು. ಮಾವುತನ ಅಪ್ಪಣೆಗಳಿಂದ ಅದಕ್ಕೆ ಮುಜುಗರವಾಗುತ್ತಿತ್ತು. ಯಾವಾಗಲೂ ದೊರೆಯುತ್ತಿದ್ದುದಕ್ಕಿಂತ ಆಹಾರವು ಕಡಮೆಯಾಗುತ್ತ ಹೋಗಿ ಆನೆಯ ತೂಕ ಇಳಿಯಲಾರಂಭವಾಯಿತು.

ಅನುಕೂಲವಾದ ಸಮಯ ಕಾದು ಮತಾದಿನ್ ಮತ್ತೆ ಒಂದು ದಿನ ರಾಜನಿಗೆ ಬಮ್ ಬಹಾದುರ್‌ನ ಮನಸ್ವೀ ವರ್ತನೆ ಹೆಚ್ಚುತ್ತಿದೆ ಎಂದು ದೂರಿ ಅದನ್ನು ಪ್ರಾಣಿಸಂಗ್ರಹಾಲಯಕ್ಕೆ ಅಟ್ಟಿ ಬಿಡಬೇಕೆಂದು ಸಲಹೆ ಮಾಡಿದ. ಪ್ರಾಣಿ ಸಂಗ್ರಹಾಲಯದ ಚಿಕ್ಕ ವಯಸ್ಸಿನ ಆನೆಯೊಂದಕ್ಕೆ ಪಟ್ಟದಾನೆಯ ಕರ್ತವ್ಯಗಳನ್ನು ನಿರ್ವಹಿಸಲು ತರಬೇತಿ ಕೊಡಬೇಕೆಂದೂ ಸೂಚಿಸಿದ.

"ಉಹುಂ, ಬಮ್ ಬಹಾದುರನಿಗೆ ಏನೂ ಆಗಿಲ್ಲ," ದೃಢವಾಗಿ ರಾಜ ತಕ್ಷಣ ಹೇಳಿದ. "ನಾನೇ ಅದಕ್ಕೆ ತಕ್ಕಷ್ಟು ಗಮನ ಕೊಟ್ಟಿಲ್ಲ. ಬಮ್ ಬದುಕಿರುವಷ್ಟು ದಿನ ಬೇರೆ ಯಾವ ಆನೆಯೂ ಅದರ ಸ್ಥಾನಕ್ಕೆ ಬರಲು ಸಾಧ್ಯವೇ ಇಲ್ಲ."

ಆ ರಾತ್ರಿ ರಾಜನು ಮಹಾರಾಣಿಗೆ ಬಮ್ ಬಹಾದೂರನ ನಿಷ್ಠೆಯನ್ನು ತೋರಿಸುವ ಅನೇಕ ನಿದರ್ಶನಗಳನ್ನು

ಹೇಳಿದ, ರಾಜ್ಯದ ಆಡಳಿತದ ಕೆಲಸಕಾರ್ಯಗಳ ಒತ್ತಡದಲ್ಲಿ ತಾನು ತನ್ನ ಗೆಳೆಯನನ್ನು ಅಲಕ್ಷ್ಯ ಮಾಡಿದೆ ಎಂದು ಬೇಸರಿಸಿಕೊಂಡ. ಬಮ್‌ನ ಯೋಗಕ್ಷೇಮ ವಿಚಾರಿಸಲು ವಾರಕ್ಕೊಮ್ಮೆಯಾದರೂ ಗಜ ಶಾಲೆಗೆ ಹೋಗುವಂತೆ ಮಹಾರಾಣಿಯನ್ನು ಕೇಳಿಕೊಂಡ.

ಮಹಾರಾಣಿ ಕೂಡಲೇ ಒಪ್ಪಿದಳು. ಮರುದಿನವೇ ಅತ್ಯಂತ ಶ್ರೇಷ್ಠ ಕಡಲೆ ಹಿಟ್ಟಿನಿಂದ ಹತ್ತು ಸೇರು ಲಾಡುಗಳನ್ನು ಮಾಡಿಸಿಕೊಂಡು ಗಜಶಾಲೆಗೆ ಹೋದಳು. ಬಮ್‌ನ ಪಾಲಿಗೆ ಸೂರ್ಯನು ದುಃಖದ ಮೋಡಗಳ ಹಿಂದಿನಿಂದ ಇದ್ದಕ್ಕಿದ್ದಂತೆ ಹೊರಕ್ಕೆ ಬಂದಂತಾಯಿತು. ಹಿಡಿಸಲಾರದ ಖುಷಿ ಅದಕ್ಕೆ. ಮಹಾರಾಣಿಯು ತಾನೇ ಲಾಡುಗಳನ್ನು ತಿನ್ನಿಸಿದಾಗ ಸಂತೋಷದಿಂದ ಅದರ ಮೈ ಕಂಪಿಸಿತು. ಅದು ಮೆಲ್ಲಗೆ ತನ್ನ ಗಿಡ್ಡ ಬಾಲವನ್ನು ಆಡಿಸಿ ಕಿವಿಗಳನ್ನು ಅಲ್ಲಾಡಿಸಿತು. ಅದರ ಸೊಂಡಿಲು ಮೃದುವಾಗಿ ಮಹಾರಾಣಿಯ ಕೈಗಳನ್ನು ಸವರಿ ಮುಂದಕ್ಕೆ ದಾಟಿ ಅವಳ ಪಾದಗಳನ್ನು ಮುಟ್ಟಿದುವು. ರಾಜನು ಅಲ್ಲಿದ್ದಿದ್ದರೆ, ಬಮ್‌ಗೆ ನಿಜವಾಗಿ ಇದ್ದ ಬಯಕೆ ತನ್ನ ಸೊಂಡಿಲನ್ನು ಮಹಾರಾಣಿಯ ಸೊಂಟದ ಸುತ್ತ ಬಳಸಿ ಅವಳನ್ನು ಎತ್ತಿ ತನ್ನ ತಲೆಯ ಮೇಲೆ ಕೂಡಿಸಿಕೊಳ್ಳುವುದು ಎನ್ನುವುದನ್ನು ಅರ್ಥ ಮಾಡಿಕೊಂಡಿರುತ್ತಿದ್ದ.

"ಬಮ್ ಬಹಾದುರ್," ಮಹಾರಾಣಿ ಹೇಳಿದಳು, "ರಾಜರು ವಾಡಿಕೆಯಂತೆ ಯಾವುದಾದರೂ ವಾರ ಬರಲು ಸಾಧ್ಯವಾಗದೆ ಹೋದರೆ ನಾನು ಅವರ ಬದಲು ಬರಬೇಕು ಎಂದು ಅವರ ಅಪೇಕ್ಷೆ. ನಿನ್ನ ಬಗ್ಗೆ ಇನ್ನು ಮುಂದೆ ಯಾವುದೇ ದೂರು ಅವರ ಕಿವಿಗೆ ಬೀಳಬಾರದು ಎಂದೂ ಅವರ ಅಪೇಕ್ಷೆ."

ಬಮ್ ಬಹಾದುರ್ ತನ್ನ ಸೊಂಡಿಲನ್ನೆತ್ತಿ ಅದರ ತುದಿಯಿಂದ ಮಹಾರಾಣಿಯ ಪಾದಗಳ ಸುತ್ತ ಭೂಮಿಯ ಮೇಲೆ ಒಂದು ವೃತ್ತವನ್ನು ಎಳೆಯಿತು.

"ಮಹಾರಾಣಿಯವರೇ," ಮಾವುತ ವಿವರಿಸಿದ, "ಯಾವಾಗಲೂ ತಮ್ಮ ಅಪೇಕ್ಷೆಯಂತೆಯೇ ನಡೆಯುವುದಾಗಿ ಬಮ್ ಪ್ರಮಾಣ ಮಾಡುತ್ತಿದೆ."

ಮಹಾರಾಣಿಯ ಮನಸ್ಸು ಬಹು ಮೃದು. ಯಾರೇ ಅವಳಿಗೆ ನಮಸ್ಕರಿಸಲಿ - ಮನುಷ್ಯರಾಗಲಿ, ಪ್ರಾಣಿಯಾಗಲಿ, ಉನ್ನತ ಸ್ಥಾನದವರಾಗಲಿ, ಕೆಳಗಿನ ಸ್ಥಾನದವರಾಗಲಿ - ತಾವಾಗಿಯೇ ಅವಳ ಕೈಗಳು ನಮಸ್ಕಾರದಲ್ಲಿ ಜೋಡಿಯಾಗುತ್ತಿದ್ದವು. ಮೊದಲಬಾರಿ ಅವಳನ್ನು ಕಂಡಾಗ ಬಮ್ ಅವಳ ಮುಗಿದ ಕೈಗಳನ್ನು ಸ್ಪರ್ಶಿಸಿತ್ತು, ಅಷ್ಟೇ. ಈಗ ಅದಕ್ಕೆ ತಡೆದುಕೊಳ್ಳಲಾಗಲಿಲ್ಲ - ತನ್ನ ಸೊಂಡಿಲನ್ನು ಒಂದು ಕ್ಷಣ ಅವಳ ಬರಿ ಮಣಿಕಟ್ಟುಗಳ ಸುತ್ತ ಸುತ್ತಿ ಅನಂತರ ಅವಳ ಸ್ಥಾನಕ್ಕೆ ಮರ್ಯಾದೆ ತೋರಲು ಎನ್ನುವಂತೆ ಹಿಂದಕ್ಕೆ ಹೆಜ್ಜೆ ಹಾಕಿತು.

ಮತಾದಿನನಿಗೆ ಇದು ಇಷ್ಟವಾಗಲಿಲ್ಲ, ಅವನು ಬಮ್ ಅನ್ನು ಗದರಿಸಿದ.

"ಬೇಡ! ಬೇಡ!" ರಾಣಿ ತಡೆದಳು, "ನನ್ನೆದುರಿಗೆ ನೀನು ಬಮ್‌ನನ್ನು ಎಂದೂ ಬಯ್ಯಕೂಡದು."

ಅಂದು ಮತಾದಿನ್ ಮಂಕಾಗಿದ್ದ. ಆದರೆ ಬಮ್ ತುಂಬ ಸಂತೋಷದಿಂದ ಉತ್ಸಾಹದಲ್ಲಿತ್ತು. ಮರುದಿನ ಬೆಳಿಗ್ಗೆ ಮತಾದಿನನಿಗೆ ಸ್ವಲ್ಪ ಹೆದರಿಕೆಯಾಯಿತು, ಬಮ್‌ಗೆ ಕೊಡಬೇಕಾದ ಆಹಾರದಲ್ಲಿ ಕಡಮೆಮಾಡಿದ್ದುದನ್ನು ಸೇರಿಸಿಬಿಟ್ಟ.

ಮಹಾರಾಣಿ ತಾನು ಆಡಿದ ಮಾತಿನಂತೆ ವಾರಕ್ಕೊಮ್ಮೆ ಬಮ್‌ನನ್ನು ನೋಡಲು ಬರುತ್ತಿದ್ದಳು. ಅವಳಿಗೆ ದೊರೆತ ಸ್ವಾಗತದಿಂದ ಅವಳಿಗೆ ಬಹು ಸಂತೋಷವಾಯಿತು. ವಾಸ್ತವವಾಗಿ ಒಂದು ಬೆಟ್ಟವೇ ಆಗಿದ್ದು, ತಮ್ಮ ತೆಳ್ಳನೆ ಸಣ್ಣ ದೇಹವನ್ನು ಒಂದು ಬಾರಿ ಸೊಂಡಿಲನ್ನು ಆಡಿಸಿದರೆ ನುಚ್ಚುನುರಿ ಮಾಡಬಲ್ಲ ಪ್ರಾಣಿಯು ಇಡೀ ಒಂದು ವಾರ ತನ್ನನ್ನು ಎದಿರುನೋಡುತ್ತಿರುತ್ತದೆ, ತನ್ನನ್ನು ನೋಡಿದಾಗ ಸಂತೋಷದಿಂದ ಕಂಪಿಸುತ್ತದೆ ಎಂಬ ಯೋಚನೆಯೇ ಅವಳಿಗೆ ಹರ್ಷವನ್ನುಂಟು ಮಾಡುತ್ತಿತ್ತು. ಅದು ಅವಳನ್ನು ಮುದ್ದಿಸಿ ಮುತ್ತು ಕೊಡುತ್ತಿತ್ತು; ಅವಳ ಕೈಗಳ ಮೇಲೆ ಸೊಂಡಿಲನ್ನಾಡಿಸಿ, ಸೊಂಡಿಲಿನಿಂದ ಅವಳ ಪಾದಗಳನ್ನು ಮುಟ್ಟುತ್ತಿತ್ತು.

ಈ ಪ್ರಾಣಿಯು ತನ್ನಲ್ಲಿ ತೋರಿಸಿದ ಪ್ರೀತಿಯಿಂದ ಮಹಾರಾಣಿಯ ಹೃದಯ ಹೆಮ್ಮೆಯಿಂದ ಉಬ್ಬುತ್ತಿತ್ತು. ಒಂದು ಬಹು ಬಲವಾದ ಕಂಬವನ್ನು ಪುಡಿಪುಡಿ ಮಾಡಬಲ್ಲ ಬಮ್ ಅವಳ ಎದುರಿನಲ್ಲಿ ಮಗುವಿನಂತೆ

ನಡೆದುಕೊಳ್ಳುತ್ತಿತ್ತು. ಮಹಾರಾಣಿಯ ಕೈಗಳನ್ನು ಪಾದಗಳನ್ನು ಮುತ್ತಿಡುವಾಗ ಮಗುವಿನಂತೆ ಅದು ಜೊಲ್ಲು ಸುರಿಸುತ್ತಿತ್ತು. ಅವಳಿಗೆ ಸಾಧ್ಯವಾದಷ್ಟು ಹತ್ತಿರ ನಿಲ್ಲಬೇಕೆಂದು ಅದರ ಬಯಕೆ. ಅವಳು ಆಹಾರವನ್ನು ಪ್ರತಿದಿನ ತಿನ್ನಿಸಿ ಮುಗಿಸುತ್ತಲೇ ಅವಳ ತೆಳುವಾದ ನಡುವಿನ ಸುತ್ತ ತನ್ನ ಸೊಂಡಿಲನ್ನು ಸುತ್ತಿ ಅವಳನ್ನು ತನ್ನ ತಲೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಿತ್ತು. ತಾಯಿ ಮಗುವನ್ನು ಎತ್ತಿಕೊಳ್ಳುವಾಗ ತೋರುವ ಮೃದುತ್ವಕ್ಕಿಂತ ಹೆಚ್ಚು ಮೃದುತ್ವವನ್ನು ತೋರಿಸುತ್ತಿತ್ತು. ಮಹಾರಾಣಿ ಅದರ ಸರಪಳಿಯನ್ನು ತೆಗೆಸುತ್ತಿದ್ದಳು, ಬಮ್ ಗಜಶಾಲೆಯಲ್ಲೆಲ್ಲ ಕುಣಿದಾಡುತ್ತಿತ್ತು. ಅವಳನ್ನು ಅರಮನೆಗೆ ಹಿಂದಕ್ಕೆ ಕರೆದೊಯ್ದು ಅದು ತನ್ನ ಸೊಂಡಿಲನ್ನೆತ್ತಿ ನಮಸ್ಕಾರ ಮಾಡುತ್ತಿತ್ತು. ಸೊಂಡಿಲಿನಿಂದ ಅವಳ ಪಾದಗಳಿಗೆ ಮುದ್ದು ಮಾಡುತ್ತಿತ್ತು, ಅನಂತರ ತಟ್ಟನೆ ಸೊಂಡಿಲಿನಿಂದ ಅವಳ ನಡುವನ್ನು ಬಳಸುತ್ತಿತ್ತು. ಮರುಕ್ಷಣವೇ ಮಹಾರಾಣಿ ನೆಲದ ಮೇಲೆ ನಿಂತಿರುತ್ತಿದ್ದಳು, ಅವಳ ಸೀರೆಯ ಒಂದು ನೆರಿಗೆಯೂ ಕೆದರುತ್ತಿರಲಿಲ್ಲ.

ರಾಜನು ರಾಜ್ಯದ ಕೆಲಸಕಾರ್ಯಗಳಲ್ಲಿ ಮುಳುಗಿಬಿಟ್ಟ, ಅವನು ಹಲವೊಮ್ಮೆ ಅರಮನೆಯಿಂದ ಹೋಗಿರುತ್ತಿದ್ದ, ಗಜಶಾಲೆಗೆ ಬರಲು ಅವನಿಗೆ ಸಾಧ್ಯವೇ ಆಗುತ್ತಿರಲಿಲ್ಲ, ಮಹಾರಾಣಿ ಹೆಚ್ಚು ಹೆಚ್ಚು ಬರಲು ಪ್ರಾರಂಭಿಸಿದಳು, ಈ ಭೇಟಿಗೆ ಉತ್ಸಾಹದಿಂದ ಕಾಯುತ್ತಿದ್ದಳೆಂಬುದು ಸ್ಪಷ್ಟವಾಗಿತ್ತು. ಹಿಂದಿನ ದಿನವೇ ಅವಳು ಸಿಹಿತಿಂಡಿಗಳನ್ನು ಮಾಡಲು ಅಪ್ಪಣೆ ಮಾಡುತ್ತಿದ್ದಳು, ಅಲ್ಲದೆ ಬೇರೆ ಬೇರೆ ಭಕ್ಷ್ಯಗಳನ್ನು ಮಾಡುವಂತೆ ನೋಡಿಕೊಳ್ಳುತ್ತಿದ್ದಳು. ಬಮ್ ಬಹಾದುರನಿಗೆ ತನ್ನ ಕೈಯಿಂದಲೇ ತಿನ್ನಿಸುತ್ತಿದ್ದಳು. ಮನುಷ್ಯರು ಯಾರೇ ತೋರಿಸಿದ ಪ್ರೀತಿಗಿಂತ ಈ ಪ್ರಾಣಿ ತೋರಿದ ಪ್ರೀತಿಯಲ್ಲಿ ಎಷ್ಟು ಮೃದುತ್ವವಿತ್ತು ಎಂದು ಅವಳು ಆಗಾಗ ಯೋಚಿಸುತ್ತಿದ್ದಳು.

ಈ ದಿನಗಳಲ್ಲಿ ಬಮ್‌ಗೆ ಮಹಾರಾಣಿಯಲ್ಲಿ ಪ್ರೀತಿಯು ಹೆಚ್ಚಿದಷ್ಟೇ ಮತಾದಿನನ ಬಗ್ಗೆ ಅಸಹ್ಯ ಹೆಚ್ಚುತ್ತ ಹೋಯಿತು. ರಾಜನು ಮತಾದಿನನಿಗೆ ಒಂದಿಷ್ಟು ಭೂಮಿಯನ್ನು ಇನಾಮಾಗಿ ಕೊಟ್ಟಿದ್ದನು. ಅಲ್ಲಿ ಆತ ಒಂದು ಗುಡಿಸಲನ್ನು ಕಟ್ಟಿದ್ದ. ಗುಡಿಸಲಿನ ಸುತ್ತ ಸಣ್ಣ ತೋಟ. ತನ್ನ ನೆಮ್ಮದಿಯನ್ನು ನೋಡಿಕೊಳ್ಳುತ್ತಿದ್ದ ಈ ಮನುಷ್ಯ ಬಮ್‌ಗೆ ಪೂರ್ತಿ ಆಹಾರವನ್ನು ಕೊಡುತ್ತಲೇ ಇರಲಿಲ್ಲ, ಎರಡು ದಿನ ಬಮ್ ಬಹಾದುರ್ ಆಹಾರವನ್ನು ಮುಟ್ಟಲಿಲ್ಲ, ಮತಾದಿನನ ಕಡೆ ನೋಡಲೂ ಇಲ್ಲ.

ಒಂದು ದಿನ ರಾಜ ಬೇಟೆಗೆ ಹೋಗಲು ನಿರ್ಧರಿಸಿದ. ಹಿಂದೆಲ್ಲ ಅವನು ಯಾವಾಗ ಹುಲಿ ಬೇಟೆಗೆ ಹೊರಟರೂ ಬಮ್ ಬಹಾದುರನ ಮೇಲೆ ಸವಾರಿಮಾಡಿದ್ದ. ಈ ಬಾರಿ ಮತಾದಿನನಿಗೆ ಬಮ್‌ನ ಮನಸ್ಸಿನ ಸ್ಥಿತಿಯ ಬಗ್ಗೆ ಸಮಾಧಾನವಿರಲಿಲ್ಲ, ಅವನು ರಾಜನಿಗೆ, ಬಮ್‌ಗೆ ಎರಡು ದಿನದಿಂದ ಆರೋಗ್ಯವಿಲ್ಲ, ಆದ್ದರಿಂದ ಬೇಟೆಗೆ ಬೇರೊಂದು ಆನೆಗೆ ತರಬೇತಿ ಕೊಟ್ಟು ಸಿದ್ಧಮಾಡಬೇಕಾಯಿತು ಎಂದು ಹೇಳಿದ.

ಬೇಟೆಯ ತಂಡ ಗಜಶಾಲೆಯನ್ನು ದಾಟಿತು. ತೆರೆದಿದ್ದ ಕಿಟಕಿಯೊಂದರಿಂದ ಅದನ್ನು ನೋಡಿದ ಬಮ್ ಅದಕ್ಕೆ ವಿರೋಧ ತೋರಿಸಲು ಗಟ್ಟಿಯಾಗಿ ದುಃಖದಿಂದ ಘೀಳಿಟ್ಟಿತು. ಆದರೆ ಯಾರೂ ಅದಕ್ಕೆ ಗಮನ ಕೊಡಲಿಲ್ಲ, ಸಂಪೂರ್ಣ ನಿರಾಸೆಯಿಂದ ಅದು ಸುಮ್ಮನಾಗಿಬಿಟ್ಟಿತು.

ಬೇಟೆಯ ತಂಡವನ್ನು ಕಳುಹಿಸಿ ಮತಾದಿನ್ ತನ್ನ ತೋಟಕ್ಕೆ ಹೋಗಿ ತನ್ನ ಗಿಡಗಳು, ಹೂವಿನ ಪಾತಿಗಳ ನಡುವೆ ಕೆಲಸದಲ್ಲಿ ಮಗ್ನನಾದ. ಅವನ ಸಂಬಳ ಕಡಮೆಯಾದರೂ ತುಂಬಾ ನೆಮ್ಮದಿಯಾಗಿ ಬದುಕುತ್ತಿದ್ದ ಎಂದು ಜನಕ್ಕೆ ತಿಳಿದಿತ್ತು.

ಇಡೀ ದಿನ ಬಮ್ ಮುನಿಸಿಕೊಂಡಿತ್ತು, ತನ್ನ ಎದೆಯಲ್ಲಿ ವಿಷದ ಮೇವನ್ನು ಮೆಲುಕುಹಾಕುತ್ತ ಚಿಂತಿಸಿತು. ಆಹಾರದ ಚೂರನ್ನೂ ಮುಟ್ಟಲಿಲ್ಲ, ಮಧ್ಯಾಹ್ನದ ಹೊತ್ತಿಗೆ ಕೆಲಸಗಾರರು ಆನೆ ಏನೋ ಒಂದು ವಿಚಿತ್ರ ರೀತಿಯಾಗಿದೆ ಎಂದು ಕಂಡು, ಮತಾದಿನನಿಗೆ ವರದಿ ಮಾಡಿದರು. ಮತಾದಿನ್ ಬಂದ, ಬಮ್‌ನ ಮೇಲೆ ಕೂಗಾಡಲು ಪ್ರಾರಂಭಿಸಿದ. ಅವನ ಕಡೆ ಕಣ್ಣನ್ನೇ ಹೊರಳಿಸದೆ ಬಮ್ ಮಾವುತನ ಕಡೆ ಬೆನ್ನು ತಿರುಗಿಸಿತು.

ಮತಾದಿನ್ ಬಮ್‌ನ ಕಾಲುಗಳಿಗೆ ಸರಪಳಿಯನ್ನು ಬಿಗಿಯಾಗಿ ಹಾಕಿದೆ ಎಂದು ಖಚಿತ ಮಾಡಿಕೊಂಡು ಅದನ್ನು ಥಳಿಸಿದ. ಆದರೆ ಬಮ್ ಮೇವನ್ನು ತಿಂದಿತೆ ಎಂದು ನೋಡಲು ತಿರುಗುತ್ತಲೇ ಬಮ್‌ನ ಸೊಂಡಿಲು

ಮಿಂಚಿನಂತೆ ಚಲಿಸಿತು, ಮತಾದಿನನನ್ನು ನೆಲಕ್ಕೆ ಬೀಳಿಸಿತು. ಬಮ್ ತನ್ನ ಮಜಬೂತಾದ ಪಾದವನ್ನು ಮಾವುತನ ಎದೆಯಮೇಲಿಟ್ಟಿತು. ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ ಮತಾದಿನ್ ಅಪ್ಪಚ್ಚಿಯಾಗಿದ್ದ. ಬಮ್ ತನ್ನ ಸರಪಳಿಗಳನ್ನು ಕಿತ್ತುಹಾಕಿತು, ಗಾಬರಿಯಿಂದ ಕೆಲಸಗಾರರು ಚೆಲ್ಲಾಪಿಲ್ಲಿಯಾದರು.

ಬಮ್ ಬಹಾದುರ್ ಗಜಶಾಲೆಯಿಂದ ಹೊರಕ್ಕೆ ನಡೆದು ಮತಾದಿನನ ತೋಟದತ್ತ ಸಾಗಿತು. ಗಿಡಗಳನ್ನು ಕಾಲಕೆಳಗೆ ತುಳಿದು ಹೂವಿನ ಪಾತಿಗಳ ಮೇಲೆ ನಡೆದಾಡಿತು. ಮತಾದಿನನ ಮಕ್ಕಳು ಬೆದರಿ ಓಡಿಹೋದರು. ಬಮ್ ಗುಡಿಸಲನ್ನು ಕೆಡವಿ ಅದನ್ನು ಚೂರುಪಾರಾಗುವ ಸ್ಥಿತಿಗೆ ತಂದುಬಿಟ್ಟಿತು.

ಬಮ್ ಬಹಾದುರ್ ಹುಚ್ಚು ಹುಚ್ಚಾಗಿ ಓಡಾಡುತ್ತಿದೆ ಎನ್ನುವ ಸುದ್ದಿ ಮಹಾರಾಣಿಗೆ ತಲುಪಿತು.

ಆನೆಯು ಇತರರಿಗೆ ತೊಂದರೆ ಮಾಡೀತು ಎಂದು ಅದಕ್ಕೆ ಗುಂಡಿಟ್ಟು ಕೊಲ್ಲಲು ಪೋಲೀಸ್ ಸೂಪರಿಂಟೆಂಡೆಂಟ್ ಅನುಮತಿ ಕೇಳಿದ.

ಮಹಾರಾಣಿ ಅಸಮ್ಮತಿ ತೋರಿಸುತ್ತ, "ಆನೆ ತೊಂದರೆ ಮಾಡಿರುವುದು ಮತಾದಿನನೊಬ್ಬನಿಗೆ ಮಾತ್ರ ಅಂತ ನೀವೇ ಈಗತಾನೆ ಹೇಳಿದಿರಿ" ಎಂದಳು.

"ಮಹಾರಾಣಿಯವರೆ, ನನಗೆ ತಿಳಿದುಬಂದ ಪ್ರಕಾರ ಅದು ಮತಾದಿನನ ತಮ್ಮನ ಮನೆಯ ಕಡೆ ಹೋಗುತ್ತಿದೆ. ಅವನನ್ನೂ ಉಳಿಸುವುದಿಲ್ಲ ಅಂತ ನನಗೆ ಖಂಡಿತ."

"ಮತಾದಿನನ ತಮ್ಮ? ಅವನಿಗೇನು ಕೆಲಸ?"

"ಅವನು ಗಜಶಾಲೆಗಳನ್ನು ನೋಡಿಕೊಳ್ಳುತ್ತಾನೆ, ಮಹಾರಾಣಿಯವರೆ"

"ಹಾಗಿದ್ದರೆ ಅವನೂ ಮತಾದಿನನಷ್ಟೆ ಭಾರಿ ಕಳ್ಳನಾಗಿರಬೇಕು," ಮಹಾರಾಣಿ ಎಂದಳು. "ಬಮ್ ಬಹಾದುರನನ್ನು ಏಕೆ ಕೊಲ್ಲಬೇಕು? ನನ್ನನ್ನು ಕೂಡಲೇ ಆನೆ ಇರುವ ಸ್ಥಳಕ್ಕೆ ಕರೆದೊಯ್ಯಿರಿ."

ಮಹಾರಾಣಿ ತನ್ನ ಕೊಠಡಿಗೆ ಹೋಗಿ, ಅವಳು ಹಿಂದಿನ ಬಾರಿ ಬಮ್ ಬಹಾದುರನನ್ನು ನೋಡಿದಾಗ ಉಟ್ಟಿದ್ದ ಸೀರೆಯನ್ನೆ ಉಟ್ಟಳು.

"ಮಹಾರಾಣಿಯವರು ಬಹು ದೊಡ್ಡ ಅಪಾಯವನ್ನು ಎದುರಿಸುತ್ತಿದ್ದೀರಿ," ಪೋಲೀಸ್ ಅಧಿಕಾರಿ ಅಸಮ್ಮತಿಯಿಂದ ಮಾತನಾಡಿದ.

"ನಾನು ನಿಮಗೆ ಹೇಳಿದ ಹಾಗೆ ಮಾಡಿ," ಮಹಾರಾಣಿ ಅಪ್ಪಣೆ ಮಾಡಿದಳು. "ನನ್ನ ಕಾರನ್ನು ತರಿಸಿ, ನಿಮಗೆ ಅಗತ್ಯ ಎನ್ನಿಸಿದ ರಕ್ಷಣೆಯ ಕ್ರಮಗಳನ್ನೆಲ್ಲ ತೆಗೆದುಕೊಳ್ಳಬಹುದು."

ಸ್ವಲ್ಪ ಹೊತ್ತಿನ ನಂತರ ಮಹಾರಾಣಿಯವರ ಕಾರು, ಅವರ ಮುಂದೆ ಶಸ್ತ್ರಸಜ್ಜಿತ ಕುದುರೆದಳ ಹಿಂಬಾಲಿಸುತ್ತಿದ್ದಂತೆ, ವೇಗವಾಗಿ ಹೋದುದನ್ನು ಜನರು ಕಂಡರು. ಅದೇ ರಸ್ತೆಯ ಇನ್ನೊಂದು ಕೊನೆಯಿಂದ ಬಮ್ ಬಹಾದುರ್ ಬಂದಿತು. ಅದು ಹೊಂಡವೊಂದರ ಪಕ್ಕದಲ್ಲಿ ನಿಂತಿತು, ಸೊಂಡಲಿನ ತುಂಬ ನೀರನ್ನು ತುಂಬಿಕೊಂಡಿತು, ಮುಂದಕ್ಕೆ ಸಾಗಿತು. ಅದರ ಹತ್ತಿರ ಬರುವಷ್ಟು ಧೈರ್ಯ ಮಾಡಿದವರಿಗೆಲ್ಲ ಕೊಳಕು ನೀರಿನ ಸ್ನಾನವೇ ಬಹುಮಾನ. ಬಮ್ ಯಾರಿಗೂ ಏನೂ ತೊಂದರೆ ಮಾಡಲಿಲ್ಲ.

ನಡುವೆ ಒಂದು ಫರ್ಲಾಂಗ್‌ನಷ್ಟೇ ಅಂತರವಿದ್ದಾಗ ಮಹಾರಾಣಿ ಕಾರಿನಿಂದ ಹೊರಕ್ಕೆ ಬಂದಳು. ಪೋಲೀಸ್ ಸೂಪರಿಂಟೆಂಡೆಂಟನಿಗೆ ತನ್ನ ಜೊತೆಗೆ ಬರಕೂಡದೆಂದು ಅಪ್ಪಣೆ ಮಾಡಿದಳು.

"ಕುದುರೆ ದಳವನ್ನ ಸಿದ್ಧವಾಗಿಟ್ಟುಕೊಳ್ಳಿ," ಅವಳು ಅಪ್ಪಣೆ ಮಾಡಿದಳು. "ನಾನು ಎರಡು ಕೈಗಳನ್ನು ಮೇಲೆತ್ತಿದರೆ ಗುಂಡು ಹಾರಿಸಿ ಎನ್ನುವುದಕ್ಕೆ ಸಂಜ್ಞೆ ಎಂದುಕೊಳ್ಳಿ. ಆದರೆ ಏನೇ ಆಗಲಿ, ನೀವಾಗಿಯೇ ಗುಂಡು ಹಾರಿಸಕೂಡದು. ಬಮ್ ಬಹಾದುರ್‌ಗೆ ಸೊಕ್ಕು ಬಂದಿಲ್ಲ ಎಂದು ನನಗೆ ಅನ್ನಿಸುತ್ತದೆ."

ಬಮ್ ಬಹಾದುರ್ ಕಾರನ್ನು ಕಂಡು ನಿಂತಿತು. ತನ್ನತ್ತ ಗುರಿಯಿಟ್ಟ ತುಪಾಕಿಗಳ ಕಡೆ ಅದರ ದೃಷ್ಟಿ ಹೊರಳಿತು. ಮೇಲೆರಗಲು ಅದು ತೀರ್ಮಾನಿಸಿತು. ವೇಗವನ್ನು ಹೆಚ್ಚು ಮಾಡಿ ಕಾರಿನ ಹತ್ತಿರ ಬಂದಾಗ ಮಹಾರಾಣಿ ಅದರ ದಾರಿಗೆ ಅಡ್ಡವಾಗಿ ನಿಂತಳು. ಸೂಪರಿಂಟೆಂಡೆಂಟನು ಗುಂಡು ಹಾರಿಸಲು ಸಿದ್ಧವಾಗಿರುವಂತೆ ತನ್ನ ಪಡೆಯವರಿಗೆ ಎಚ್ಚರಿಸಿದ.

ಮಹಾರಾಣಿ ಹಿಂದಕ್ಕೆ ತಿರುಗಿ ಆದಷ್ಟು ಗಟ್ಟಿಯಾಗಿ ಕೂಗಿದಳು, "ನಾನು ಸಂಜ್ಞೆ ಮಾಡುವವರೆಗೆ ಗುಂಡು ಹಾರಿಸಬೇಡಿ."

ಅನಂತರ ಅವಳು ಬಮ್ ಬಹಾದುರನನ್ನು ಸಂಧಿಸಲು ಓಡಿದಳು.

ಮಹಾರಾಣಿಗೂ ಆನೆಗೂ ನಡುವೆ ಐವತ್ತೆ ಗಜಗಳ ಅಂತರವಿತ್ತು. ಸೂಪರಿಂಟೆಂಡೆಂಟನೂ ಅವನ ದಳದವರೂ ನಾಗಲೋಟದಲ್ಲಿ ಮುಂದಕ್ಕೆ ಬಂದರು. ಬಮ್ ಬಹಾದುರ್ ತಾನು ನಡೆಯುತ್ತಿದ್ದ ದಾರಿಯಲ್ಲಿ ನಿಶ್ಚಲವಾಗಿ ನಿಂತಿತು. ಮಹಾರಾಣಿ ದಳದವರಿಗೆ ಮುಂದಕ್ಕೆ ಬರಕೂಡದೆಂದು ಆಜ್ಞೆ ಮಾಡಿದಳು. ನಿಧಾನವಾಗಿ ಕ್ರಮಗತಿಯಲ್ಲಿ ಹೆಜ್ಜೆ ಹಾಕುತ್ತ ಮಹಾರಾಣಿ ಆನೆಯ ಹತ್ತಿರ ಹೋದಳು. ಕಡೆಗೂ ಬಮ್ ಬಹಾದುರ್ ಅವಳನ್ನು ನೋಡಿತು. ಅದು ನಮಸ್ಕಾರಪೂರ್ವಕವಾಗಿ ತನ್ನ ಸೊಂಡಿಲನ್ನೆತ್ತಿತು. ಮಹಾರಾಣಿ ಪ್ರತಿಯಾಗಿ ತನ್ನ ಕೈಗಳನ್ನು ಜೋಡಿಸಿದಳು. ಆದರೆ ಹಿಂದೆಮಾಡುತ್ತಿದ್ದಂತೆ ಬಮ್ ಬಹಾದುರ್ ಅವಳ ಕೈಗಳನ್ನು ಮುಟ್ಟಲಿಲ್ಲ.

ಪ್ರೀತಿಯಿಂದ ಮಹಾರಾಣಿ ಹೇಳಿದಳು "ನನ್ನ ಪ್ರೀತಿಯ ಬಮ್ ಬಹಾದುರ್, ಇವತ್ತು ನಿನ್ನ ಸೊಂಡಿಲು ಸ್ವಚ್ಛವಾಗಿಲ್ಲ ಎನ್ನುವುದು ಕಾಣುತ್ತಿದೆ. ಆದರೆ ನೀನು ನನ್ನನ್ನು ಮುಟ್ಟದೆ ಇದ್ದರೂ ನನ್ನ ಮೈಮೇಲೆಲ್ಲ ನಿನ್ನ ಸೊಂಡಿಲಿನ ಸ್ಪರ್ಶ ನನಗಾಗುತ್ತಿದೆ. ಹೇಳು ಬಮ್ ಬಹಾದುರ್, ಇಂತಹ ದುಸ್ಥಿತಿಗೆ ಹೇಗೆ ಬಂದೆ?"

ತನ್ನ ಸೊಂಡಿಲಿನ ಕೊನೆಯಿಂದ ಬಮ್ ಬಹಾದುರ್, ತನ್ನ ಹೃದಯದ ಸಂಕಟವನ್ನೆಲ್ಲ ಆ ವೃತ್ತಗಳು ತೋರಿಸುತ್ತವೆಯೋ ಎನ್ನುವಂತೆ ಮಹಾರಾಣಿಯ ಪಾದಗಳ ಸುತ್ತ ಅನೇಕ ವೃತ್ತಗಳನ್ನು ಎಳೆಯಿತು.

ಮಹಾರಾಣಿ ಬಹು ಮೃದುವಾದ ದನಿಯಲ್ಲಿ ಹೇಳಿದಳು, "ನನ್ನ ಧೀರ ಬಮ್ ಬಹಾದುರ್, ಮನಸ್ಸಿನಲ್ಲಿ ಏನೇನು ವಿಚಾರಗಳು ಬರುತ್ತಿವೆ ಅಂತ ನನಗೆ ಗೊತ್ತು. ನಿನಗೆ ಹುಚ್ಚು ಹಿಡಿದಿಲ್ಲ ಅಂತ ನನಗೆ ಗೊತ್ತು. ಕಹಿಯಿಂದ ನಿನ್ನ ಸುಂದರ ಚೇತನ ಬಾಡಿಹೋಗಿದೆ. ದ್ವೇಷ, ಕಹಿಗಳಿಂದ ಜನ ಹೇಗಾಗಿ ಬಿಡುತ್ತಾರೆ ಅಂತ ನನಗೆ ಗೊತ್ತು."

ಬಮ್ ಬಹಾದುರ್ ಅವಳ ಪಾದಗಳ ಸುತ್ತ ಇನ್ನೊಂದು ವೃತ್ತವನ್ನು ಎಳೆಯಿತು. ಮಹಾರಾಣಿ ಆನೆಯ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡಿದಳು. ಅವುಗಳಲ್ಲಿ ನೀರು ತುಂಬಿ ಬಂದುದನ್ನು ಅವಳು ಕಂಡಳು.

"ಎಲ್ಲಿಗೆ ಹೋಗುತ್ತಿದ್ದೆ, ಬಮ್ ಬಹಾದುರ್? ಮತಾದಿನನ ತಮ್ಮನ ಮನೆಗೆ? ಅವನೂ ನಿನಗೆ ನೋವನ್ನುಂಟು ಮಾಡಿದನೇನು?"

ಬಮ್ ಬಹಾದುರ್ ಬಲಗಾಲನ್ನೆತ್ತಿ ನೆಲವನ್ನು ಒದೆಯಿತು. ಕಾಲಿನ ಮೇಲೆಲ್ಲ ರಕ್ತ ಹತ್ತಿಕೊಂಡಿದ್ದುದನ್ನು ಅವಳು ಗಮನಿಸಿದಳು.

ಮಹಾರಾಣಿ ಮಾತನ್ನು ಮುಂದುವರೆಸಿದಳು. "ಬಮ್ ಬಹಾದುರ್, ಧೀರರ ಹೃದಯಕ್ಕೆ ವಿಷವನ್ನು ಸೇರಿಸುವವರು ಸಾವಿನ ಜೊತೆಗೆ ಆಡುತ್ತಾರೆ, ಅಷ್ಟೇ. ನಿನಗೆ ಇನ್ನು ಮೇಲೆ ಯಾರೂ ತೊಂದರೆ ಕೊಡದ ಹಾಗೆ ನಾನು ನೋಡಿಕೊಳ್ಳುತ್ತೇನೆ. ಯಾರೂ ನಿನಗೆ ಸೇರಿದ್ದನ್ನು ಕದಿಯದಿರುವಂತೆ ನೋಡಿಕೊಳ್ಳುತ್ತೇನೆ. ಮನುಷ್ಯರಂತೆ ಹೊರಕ್ಕೆ ಕಂಡರೂ ಮನಸ್ಸಿನಲ್ಲಿ ನಿಜವಾಗಿ ಪಿಶಾಚಿಗಳೇ ಆದ ದುಷ್ಟರಿಂದ ನಿನ್ನನ್ನು ರಕ್ಷಿಸುತ್ತೇನೆ."

ಬಮ್ ಬಹಾದುರ್ ಮೌನವಾಗಿ ಕೇಳುತ್ತಿತ್ತು. ಮಹಾರಾಣಿ ಮತ್ತೂ ಅದಕ್ಕೆ ಹೇಳಿದಳು, "ಪ್ರೀತಿಯ ಬಮ್ ಬಹಾದುರ್, ನಿನ್ನ ಹೃದಯದಲ್ಲಿ ಕೋಪವೇ ಪ್ರೀತಿಗಿಂತ ಹೇಗೆ ಬಲಿಷ್ಠವಾಯಿತು ಎಂದು ನನಗೆ ಅರ್ಥವಾಗಿದೆ. ನೀನು ಮತಾದಿನನ ಮಕ್ಕಳು ವಾಸಮಾಡುತ್ತಿದ್ದ ಗುಡಿಸಲನ್ನು ಏಕೆ ಬೀಳಿಸಿದೆ? ಅವರು ನಿನಗೇನೂ ಕೆಡುಕನ್ನು ಮಾಡಿಲ್ಲ. ನೀನು ಮತ್ತೆ ಅದನ್ನು ಕಟ್ಟಿಕೊಡಬೇಕು."

ಬಮ್ ಬಹಾದೂರ್ ಮಹಾರಾಣಿಯ ಪಾದಗಳ ಸುತ್ತ ಎರಡು ವೃತ್ತಗಳನ್ನು ಎಳೆಯಿತು. ಮಹಾರಾಣಿ ಮುಂದುವರಿದು ಹೇಳಿದಳು. "ಹಾಗೆ ಮಾಡಿದ್ದಕ್ಕೆ ನಿನಗೆ ವಿಷಾದವಾಗಿದೆ ಎಂದು ನನಗೆ ಗೊತ್ತು. ಮತ್ತೆ ಅದನ್ನು ನೀನು ಕಟ್ಟಿದರೆ ನನಗೆ ಬಹಳ ಸಂತೋಷವಾಗುತ್ತದೆ. ಅದರ ಖರ್ಚಿನ ಹಣದಷ್ಟು ಹಿಂದಕ್ಕೆ

ಬರುವವರೆಗೆ ನೀನು ಅರೆಪಾಲು ಆಹಾರದಲ್ಲೆ ಬದುಕುತ್ತಿ ಎನ್ನುವ ಷರತ್ತಿನ ಮೇಲೆ ನಾನು ಅದನ್ನು ಮತ್ತೆ ಕಟ್ಟಿಸುತ್ತೇನೆ. ನಿನಗೆ ಒಪ್ಪಿಗೆಯೇ?"

ಮಹಾರಾಣಿ ಹೇಳಿದ್ದು ಬಮ್ ಬಹಾದುರ್‌ಗೆ ಅರ್ಥವಾಯಿತೇ ನಮಗೆ ಗೊತ್ತಿಲ್ಲ. ವೃತ್ತಗಳನ್ನೆಳೆಯುವ ಭಾಷೆಯೊಂದೇ ಅದಕ್ಕೆ ಬರುತ್ತಿದ್ದುದು. ಅದು ಅನೇಕ ವೃತ್ತಗಳನ್ನು ಎಳೆಯಿತು.

ಆನೆಯ ಸೊಂಡಿಲಿನ ಮೇಲಿನ ಮಣ್ಣು ಒಣಗಿ ಬಿಲ್ಲೆಗಳಾಗಿದ್ದುದನ್ನು ಮಹಾರಾಣಿ ಗಮನಿಸಿದಳು. ಅವಳು ಕೈಯನ್ನು ಚಾಚಿ ಸೊಂಡಿಲನ್ನು ಪ್ರೀತಿಯಿಂದ ಸವರಿದಳು. ಹಿಂದೆಲ್ಲ ಆನೆಯು ಮಹಾರಾಣಿಗೆ ತನ್ನ ಪ್ರೀತಿಯನ್ನು ಅರ್ಥಮಾಡಿಸಲು ಪ್ರಯತ್ನಿಸುತ್ತಿತ್ತು. ಈಗ ಮಹಾರಾಣಿ, ಆನೆಯನ್ನು ತಾನು ಎಷ್ಟು ಪ್ರೀತಿಸುತ್ತೇನೆ ಎನ್ನುವುದನ್ನು ಅದಕ್ಕೆ ತಿಳಿಸಲು ಪ್ರಯತ್ನಿಸುತ್ತಿದ್ದಳು. ಬೆಟ್ಟದಂತೆ ನಿಂತಿತ್ತು ಅದು, ಜೀವಂತವಾಗಿದ್ದರೂ ಸ್ವಲ್ಪ ಚಲಿಸಿದರೆ ಈ ಪ್ರೀತಿ, ಚೆಲುವುಗಳ ದರ್ಶನ ಎಲ್ಲಿ ಮಾಯವಾಗುತ್ತೋ ಎಂದು ಚಲಿಸಲು ಇಷ್ಟವಿಲ್ಲದೆ ನಿಂತಿತ್ತು.

ತನ್ನನ್ನು ಹಿಂಬಾಲಿಸುವಂತೆ ಬಮ್ ಬಹಾದೂರ್‌ಸಿಗೆ ಸಂಜ್ಞೆ ಮಾಡಿ ರಾಣಿಯು ಮೋಡಿಯನ್ನು ಮುರಿದಳು. ಅವಳು ಮುಂದೆ ನಡೆದಳು, ಅವಳ ಹಿಂದೆ ಆನೆ, ಅದರ ಹಿಂದೆ ಪೋಲೀಸ್ ಅಧಿಕಾರಿ ಮತ್ತು ಕುದುರೆ ದಳ, ಹೀಗೆ ಬಮ್ ಬಹಾದುರ್‌ನನ್ನು ಗಜಶಾಲೆಗೆ ಹಿಂದಕ್ಕೆ ಕರೆತಂದರು.

ಗಜಶಾಲೆಯ ನಿರ್ವಾಹಕರ ಬದಲಾವಣೆಯಾಯಿತು. ಬಮ್ ಬಹಾದುರನನ್ನು ಬಿಟ್ಟು ಉಳಿದೆಲ್ಲ ಆನೆಗಳಿಗೂ ಸಂಪೂರ್ಣ ಪ್ರಮಾಣದಲ್ಲಿ ಆಹಾರವನ್ನು ಕೊಡುತ್ತಿದ್ದರು. ಆದರೂ ಬಮ್ ಬಹಾದುರ್ ತಾನು ಗಜಶಾಲೆಯ ರಾಜ ಎನ್ನುವಂತೆಯೇ ನಡೆದುಕೊಳ್ಳುತ್ತಿತ್ತು.

ಮಹಾರಾಣಿ ಬಹು ದಿನಗಳ ಕಾಲ ಗಜಶಾಲೆಗೆ ಭೇಟಿಕೊಡಲಿಲ್ಲ. ಸಾಕಷ್ಟು ಕಾಲದ ನಂತರ ಅವಳು ಬಮ್‌ಬಹಾದುರ್‌ನನ್ನು ಕರೆಸಿ, "ಅರ್ಧ ಪ್ರಮಾಣದ ಆಹಾರ ನಿನಗೆ ಒಗ್ಗಿದಂತೆ ಕಾಣುತ್ತದೆ; ಹಿಂದೆ ಯಾವಾಗಲೂ ನೀನು ಇಷ್ಟು ಆರೋಗ್ಯದಿಂದ ಸಂತೋಷದಿಂದ ಇದ್ದಂತೆ ಕಂಡಿರಲಿಲ್ಲ. ಈಗ ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡಿದ್ದೀಯೆ, ನೀನು ಯಾವಾಗಲೂ ಸಂತೋಷವಾಗಿರುತ್ತೀ" ಎಂದಳು.

ಬಮ್ ಬಹಾದುರ್ ಮಹಾರಾಣಿಯನ್ನು ಸೊಂಡಿಲಿನಲ್ಲಿ ಎತ್ತಿಕೊಂಡು ಬೆನ್ನಮೇಲೆ ಕುಳ್ಳಿರಿಸಿಕೊಂಡಿತು.

# ಅಂಚೆ ಚೀಟಿ ಸಂಗ್ರಹ ಪುಸ್ತಕ

## ಸುಂದರ ರಾಮಸ್ವಾಮಿ

ತನ್ನ ಜನಪ್ರಿಯತೆ ಇದ್ದಕ್ಕಿದ್ದಂತೆ ಕುಗ್ಗುತ್ತಿದೆ ಎಂದು ರಾಜಪ್ಪನಿಗೆ ಅರಿವಾಯಿತು. ಮೂರು ದಿನಗಳಿಂದ ಎಲ್ಲರೂ ನಾಗರಾಜನನ್ನೆ ಸುತ್ತುಗಟ್ಟುತ್ತಿದ್ದರು.

ನಾಗರಾಜನ್‌ಗೆ ತಲೆ ತಿರುಗಿ ಹೋಗಿದೆ ಎಂದು ಅವರಿಗೆಲ್ಲ ಹೇಳಲು ರಾಜಪ್ಪ ಪ್ರಯತ್ನಿಸಿದ. ಆದರೆ, ಯಾರೂ ಅವನಿಗೆ ಗಮನವನ್ನು ಕೊಡಲಿಲ್ಲ. ಏಕೆಂದರೆ, ನಾಗರಾಜನ್ ತನ್ನ ಚಿಕ್ಕಪ್ಪ ಸಿಂಗಾಪುರದಿಂದ ಕಳುಹಿಸಿದ ಅಂಚೆಚೀಟಿ ಸಂಗ್ರಹಪುಸ್ತಕ (ಸ್ಟಾಂಪ್ ಆಲ್ಬಮ್)ವನ್ನು ಹಂಚಿಕೊಳ್ಳುವುದರಲ್ಲಿ ಉದಾರವಾಗಿದ್ದ. ಹುಡುಗರು ನಾಗರಾಜನನ್ನು ಸುತ್ತುಗಟ್ಟಿ, ಬೆಳಗಿನ ತರಗತಿಗೆ ಗಂಟೆ ಬಾರಿಸುವವರೆಗೆ ಸಂಗ್ರಹಪುಸ್ತಕವನ್ನು ತಮ್ಮ ಕಣ್ಣುಗಳಿಂದಲೇ ನುಂಗುತ್ತಿದ್ದರು, ಊಟಕ್ಕೆ ಬಿಡುವು ಕೊಟ್ಟಾಗ ಅವನ ಸುತ್ತಲೂ ಸುಳಿದಾಡುತ್ತಿದ್ದರು, ಸಂಜೆ ಅವನ ಮನೆಗೆ ಮುತ್ತಿಗೆ ಹಾಕುತ್ತಿದ್ದರು. ಒಂದಿಷ್ಟು ತಾಳ್ಮೆ ಗೆಡದೆ ನಾಗರಾಜನ್ ಅವರಿಗೆಲ್ಲ ಸಂಗ್ರಹ ಪುಸ್ತಕವನ್ನು ತೋರಿಸುತ್ತಿದ್ದ. ಅವನು ಒಂದೇ ಒಂದು ಷರತ್ತನ್ನು ವಿಧಿಸಿದ್ದ. "ಯಾರೂ ಸಂಗ್ರಹ ಪುಸ್ತಕವನ್ನು ಮುಟ್ಟಬಾರದು." ಅವನು ಅದನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ತೆರೆದು ತಾನೇ ಪುಟಗಳನ್ನು ತಿರುವಿ ಹಾಕಿ, ಪ್ರತಿಯೊಬ್ಬರು ಮನಸ್ಸು ತೃಪ್ತಿಯಾಗುವಂತೆ ಕಣ್ತುಂಬ ನೋಡಲು ಅವಕಾಶ ಕೊಡುತ್ತಿದ್ದ.

ಹುಡುಗಿಯರು ಸಂಗ್ರಹ ಪುಸ್ತಕವನ್ನು ನೋಡುವ ಆಸೆ. ಅವರಲ್ಲಿ ಬಹು ದಿಟ್ಟಳಾದ ಪಾರ್ವತಿ ನಾಗರಾಜನ್‌ನ ಹತ್ತಿರ ಬಂದು ಹುಡುಗಿಯರ ಪರವಾಗಿ ಕೇಳಿದಳು. ನಾಗರಾಜನ್ ಸಂಗ್ರಹಪುಸ್ತಕಕ್ಕೆ ಹೊದಿಕೆ ಹಾಕಿ ಅವಳಿಗೆ ಕೊಟ್ಟು ಹುಡುಗಿಯರೆಲ್ಲ ಅದನ್ನು ನೋಡಿದನಂತರ ಸಂಗ್ರಹ ಪುಸ್ತಕ ಸಂಜೆ ಅವನಿಗೆ ಹಿಂದಕ್ಕೆ ಬಂತು.

ಒಂದು ಕಾಲದಲ್ಲಿ ರಾಜಪ್ಪನ ಸಂಗ್ರಹಪುಸ್ತಕ ಬಹಳ ಪ್ರಸಿದ್ಧವಾಗಿತ್ತು. ದುಂಬಿಗಳು ಜೇನನ್ನು ಸಂಗ್ರಹಿಸುವಂತೆ ರಾಜಪ್ಪ ಬಹು ಶ್ರಮದಿಂದ ಅಂಚೆಚೀಟಿಗಳನ್ನು ಸಂಗ್ರಹಿಸಿದ್ದ. ಅಂಚೆಚೀಟಿಗಳನ್ನು ಸಂಗ್ರಹಿಸುವ ಇತರರ ಭೇಟಿಗಾಗಿ ಬೆಳಿಗ್ಗೆ ಬೇಗನೆ ಹೊರಡುತ್ತಿದ್ದ. ಒಂದೇ ಒಂದು ಯು.ಎಸ್.ಎಸ್.ಆರ್. ಗೆ ಬದಲು ಎರಡು ಪಾಕಿಸ್ತಾನಗಳನ್ನು ವಿನಿಮಯ ಮಾಡಿಕೊಳ್ಳುವನು. ಸಂಜೆ ತನ್ನ ಶಾಲೆಯ ಪುಸ್ತಕಗಳನ್ನು ಒಂದು ಮೂಲೆಯಲ್ಲೊಗೆದು ತನ್ನ ಚಡ್ಡಿಯ ಜೇಬಿಗೆ ತಿಂಡಿಯನ್ನು ತುರುಕಿಕೊಂಡು ಒಂದು ಲೋಟ ಕಾಫಿಯನ್ನು ಗಂಟಲಲ್ಲಿ ಅಡಚಿಕೊಂಡು ಮತ್ತೆ ಓಡುವನು. ನಾಲ್ಕು ಮೈಲಿಯಾಚೆ ಒಬ್ಬ ಹುಡುಗನ ಹತ್ತಿರ ಕೆನಡಾ ಇದೆಯಂತೆ ... ಅವನ ತರಗತಿಯಲ್ಲಿ ಅವನದೇ ಬಹು ದೊಡ್ಡ ಸಂಗ್ರಹ ಪುಸ್ತಕ. ಕಂದಾಯ ಅಧಿಕಾರಿಯ ಮಗ ಅದನ್ನು ಇಪ್ಪತ್ತೈದು ರೂಪಾಯಿಗಳಿಗೆ ಕೊಳ್ಳಲು ಬಯಸಿದ. ಎಷ್ಟು ಧೈರ್ಯ! ರಾಜಪ್ಪ ಉತ್ತರ ಕೊಟ್ಟಿದ್ದ, "ನಿನ್ನ ಪುಟ್ಟ ತಮ್ಮನ್ನ ನನಗೆ ಮೂವತ್ತು ರೂಪಾಯಿಗೆ ಮಾರ್ತೀಯಾ?" ಹುಡುಗರು ಅವನ ಉತ್ತರಕ್ಕೆ ಚಪ್ಪಾಳೆ ತಟ್ಟಿದ್ದರು.

ಆದರೆ ಈಗ ಅವನ ಸಂಗ್ರಹ ಪುಸ್ತಕದ ಕಡೆ ಕಣ್ಣು ಹೊರಳಿಸುವವರೇ ಇರಲಿಲ್ಲ. ಇನ್ನೂ ಬೇಸರದ ಸಂಗತಿ ಎಂದರೆ, ನಾಗರಾಜನ್‌ನ ಸಂಗ್ರಹಪುಸ್ತಕದ ಮುಂದೆ ಇದನ್ನು ನಿವಾಳಿಸಿ ಹಾಕಬೇಕು ಎಂದೆಲ್ಲ ಟೀಕೆ ಮಾಡುತ್ತ ಹೋಲಿಸುತ್ತಿದ್ದರು.

ರಾಜಪ್ಪ ನಾಗರಾಜನ್‌ನ ಸಂಗ್ರಹಪುಸ್ತಕದ ಕಡೆ ತಿರುಗಿಯೂ ನೋಡಲಿಲ್ಲ. ಇತರ ಹುಡುಗರು ಅದರ

ಸುತ್ತ ಠಳಾಯಿಸುತ್ತಿದ್ದಾಗ ಅವನು ಮುಖವನ್ನು ಬೇರೆ ಕಡೆಗೆ ತಿರುಗಿಸಿಬಿಡುತ್ತಿದ್ದ. ಆದರೆ ಕಣ್ಣಿನ ಕೊನೆಯಿಂದ ಅದನ್ನು ಒಂದಿಷ್ಟು ನೋಡಲು ಪ್ರಯತ್ನಿಸಿದ. ನಿಜವಾಗಿ ಭರ್ಜರಿಯಾಗಿತ್ತು! ರಾಜಪ್ಪನ ಸಂಗ್ರಹದಲ್ಲಿದ್ದ ಅಂಚೆ ಚೀಟಿಗಳೇ ಅದರಲ್ಲಿ ಇದ್ದಿಲ್ಲದಿರಬಹುದು, ಅಷ್ಟೊಂದು ಅಂಚೆಚೀಟಿಗಳೂ ಇರಲಿಲ್ಲವೇನೊ, ಆದರೆ ಅಂತಹ ಸಂಗ್ರಹಪುಸ್ತಕ ಅದೊಂದೇ. ಆ ಊರಿನ ಯಾವ ಅಂಗಡಿಯಲ್ಲಿ ಅಂತಹುದು ಇರಲಿಲ್ಲ.

ಸಂಗ್ರಹಪುಸ್ತಕದ ಮೊದಲ ಪುಟದಲ್ಲಿ ನಾಗರಾಜನ್‌ನ ಚಿಕ್ಕಪ್ಪ ತನ್ನ ಸೋದರಳಿಯನ ಹೆಸರನ್ನು ದೊಡ್ಡ ಅಕ್ಷರಗಳಲ್ಲಿ ಬರೆದಿದ್ದ. ಎ. ಎಸ್. ನಾಗರಾಜನ್. ಇದರ ಕೆಳಗೆ ಈ ಒಕ್ಕಣೆ ಇತ್ತು.

ಈ ಸಂಗ್ರಹಪುಸ್ತಕವನ್ನು ಕದಿಯಲು ಪ್ರಯತ್ನಿಸುತ್ತಿರುವ ನೀಚನಿಗೆ, ಕಾಣುತ್ತಿದೆಯೇ ಮೇಲೆ ನನ್ನ ಹೆಸರು? ಇದು ನನ್ನ ಸಂಗ್ರಹಪುಸ್ತಕ. ಹುಲ್ಲು ಹಸಿರಾಗಿರುವವರೆಗೆ, ತಾವರೆ ಕೆಂಪಾಗಿರುವವರೆಗೆ, ಸೂರ್ಯ ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಮುಳುಗುವವರೆಗೆ ಇದು ನನ್ನದು, ನನ್ನೊಬ್ಬನದೇ.

ಹುಡುಗರು ಪಂಕ್ತಿಗಳನ್ನು ತಮ್ಮ ಸಂಗ್ರಹಪುಸ್ತಕಗಳಲ್ಲಿ ಬರೆದಿಟ್ಟುಕೊಂಡರು. ಹುಡುಗಿಯರೂ ತಮ್ಮ ಪುಸ್ತಕಗಳಲ್ಲಿ ಮತ್ತು ನೋಟ್‌ಬುಕ್‌ಗಳಲ್ಲಿ ಬರೆದಿಟ್ಟುಕೊಂಡರು.

ರಾಜಪ್ಪ ಗದರಿಸಿದ, "ನಿಮಗೆ ಈ ಕಾಪಿ ಮಾಡುವ ಉತ್ಸಾಹ ಯಾಕೆ?"

ಹುಡುಗರು ಅವನ ಕಡೆ ದುರುಗುಟ್ಟಿಕೊಂಡು ನೋಡಿದರು. ಕೃಷ್ಣನ್ ಒರಟಾಗಿ ಉತ್ತರಿಸಿದ, "ಹೋಗಾಚೆ, ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ!"

"ಹೊಟ್ಟೆಕಿಚ್ಚೆ? ನನಗೆ! ನನಗೆ ಯಾಕಾಗಬೇಕು? ನನ್ನ ಆಲ್ಬಮ್ ಇನ್ನೂ ದೊಡ್ಡದು, ಅಲ್ಲವೆ?"

"ಅವನ ಆಲ್ಬಮ್‌ನಲ್ಲಿರೋ ಸ್ಟಾಂಪ್‌ಗಳಂತಹವು ನಿನ್ನ ಪುಸ್ತಕದಲ್ಲಿಲ್ಲ. ಆ ಇಂಡೋನೇಷ್ಯದ ಸೊಗಸಾದ ಸ್ಟಾಂಪ್ ನೋಡು - ಅದನ್ನ ಮೇಲಕ್ಕೆ ತೆಗೆದು ಬೆಳಕಿಗೆ ಹಿಡಿದು ನೋಡು."

"ನನ್ನ ಹತ್ತಿರ ಇರೋ ಸ್ಟ್ಯಾಂಪ್‌ಗಳು ಅವನ ಹತ್ತಿರ ಇಲ್ಲ."

"ಅಹ್ಹ! ಅವನ ಹತ್ತಿರ ಇಲ್ದೇ ಇರೋದು ಒಂದೇ ಒಂದನ್ನ ತೋರಿಸು!"

"ನನ್ನ ಹತ್ತಿರ ಇಲ್ದೇ ಇರೋದು ಒಂದನ್ನ ತೋರಿಸಿ. ಹತ್ತು ರೂಪಾಯಿ ಬಾಜಿ ಕಟ್ಟೋಣ."

"ನಿನ್ನ ಆಲ್ಬಮ್ ತಿಪ್ಪೇಗುಂಡಿಗೆ ಎಸೆಯೋದಕ್ಕೆ ಸರಿ," ಕೃಷ್ಣನ್ ಮೂದಲಿಸಿದ. ಹುಡುಗರೆಲ್ಲ ಹಾಡಲು ಪ್ರಾರಂಭಿಸಿದರು. "ತಿಪ್ಪೇಗುಂಡಿ ಆಲ್ಬಮ್! ತಿಪ್ಪೇ ಗುಂಡಿ ಆಲ್ಬಮ್!"

ರಾಜಪ್ಪ ಒಳಗೊಳಗೇ ಕುದಿದ. ಶಾಲೆಗೆ ಹೋಗುವುದೆಂದರೇ ಅವನಿಗೆ ದ್ವೇಷ. ಹುಡುಗರಿಗೆ ಅವನು ಮುಖ ತೋರಿಸುವುದು ಹೇಗೆ? ಸಾಮಾನ್ಯವಾಗಿ ಶನಿವಾರ ಭಾನುವಾರ ಅವನು ಬಿಡುವಿಲ್ಲದೆ ಅಂಚೆಚೀಟಿಗಳ ಬೇಟೆಯಾಡುತ್ತಿದ್ದ. ಆದರೆ ಈ ವಾರ ಆ ದಿನಗಳಲ್ಲಿ ಮನೆಯಿಂದ ಹೊರಗೆ ಕಾಲಿಟ್ಟಿದ್ದೇ ಕಡಿಮೆ. ಸಾಮಾನ್ಯವಾಗಿ, ಅವನು ತನ್ನ ಆಲ್ಬಮ್‌ನ ಪುಟಗಳನ್ನು ಮತ್ತೆ ಮತ್ತೆ ತಿರುವಿಹಾಕದಿದ್ದ ದಿನವೇ ಇಲ್ಲ. ರಾತ್ರಿ ಸಹ ಸದ್ದಿಲ್ಲದೆ ಹಾಸಿಗೆಯಿಂದೆದ್ದು ಆಲ್ಬಮ್ ನೋಡುತ್ತಿರುತ್ತಿದ್ದ. ಆದರೆ ಎರಡು ದಿನಗಳು ಕಳೆದರೂ ಅವನು ಅದನ್ನು ಮುಟ್ಟಿಯೇ ಇರಲಿಲ್ಲ. ಅದನ್ನು ನೋಡಿದರೇ ಅವನ ಮೈಯಲ್ಲೆಲ್ಲ ಕೋಪವೇ. ನಾಗರಾಜನ್‌ನ ಸಂಗ್ರಹಪುಸ್ತಕದ ಜೊತೆಗೆ ಹೋಲಿಸಿದರೆ ತನ್ನ ಆಲ್ಬಮ್ ಚಿಂದಿಬಟ್ಟೆಯ ಗಂಟಾಗಿ ಕಾಣುತ್ತಿತ್ತಷ್ಟೆ.

ಸಂಜೆ ರಾಜಪ್ಪ ನಾಗರಾಜನ್ ಮನೆಗೆ ಹೋದ. ಅವನು ಮನಸ್ಸು ಮಾಡಿಬಿಟ್ಟಿದ್ದ - ಈ ಅಪಮಾನವನ್ನು ಇನ್ನು ತಡೆದುಕೊಳ್ಳುವುದು ಅವನಿಗೆ ಸಾಧ್ಯವೇ ಇರಲಿಲ್ಲ. ಏನು ಮಹಾ, ನಾಗರಾಜನ್‌ಗೆ ಅಕಸ್ಮಾತ್ತಾಗಿ ಒಂದು ಅಂಚೆಚೀಟಿ ಸಂಗ್ರಹಪುಸ್ತಕ ಸಿಕ್ಕಿಬಿಟ್ಟಿತ್ತು. ಅಂಚೆಚೀಟಿ ಸಂಗ್ರಹದ ರಹಸ್ಯಗಳು ಅವನಿಗೇನು ಗೊತ್ತು? ಅಥವಾ ತಜ್ಞರು ಅಂಚೆಚೀಟಿಗಳಿಗೆ ಹೇಗೆ ಬೆಲೆ ಕಟ್ಟುತ್ತಾರೆ ಎನ್ನುವುದೇನು ಗೊತ್ತು? ಪ್ರಾಯಶಃ ಅವನು, ಅಂಚೆಚೀಟಿ ಎಷ್ಟು ದೊಡ್ಡದಾಗಿದ್ದರೆ ಅಷ್ಟು ಬೆಲೆ ಬಾಳುತ್ತದೆ ಎಂದು ತಿಳಿದುಕೊಂಡಿರಬಹುದು. ಅಥವಾ, ಹೆಚ್ಚು ಬಲಿಷ್ಠ ದೇಶದ ಅಂಚೆ ಚೀಟಿಯು ಅಷ್ಟು ಬಲಿಷ್ಠವಲ್ಲದ ದೇಶದ ಅಂಚೆಚೀಟಿಗಿಂತ ಬೆಲೆಬಾಳುತ್ತದೆ ಎಂದುಕೊಂಡಿರಬಹುದು. ನಾಗರಾಜನ್ ಏನಿದ್ದರೂ ಹೆಚ್ಚು ತಿಳಿಯದ ಹವ್ಯಾಸಿ. ರಾಜಪ್ಪ ಸುಲಭವಾಗಿ

ಅಷ್ಟು ಮೌಲ್ಯವಿಲ್ಲದ ಅಂಚೆ ಚೀಟಿಗಳನ್ನು ಅವನಿಗೆ ತಗುಲಿಹಾಕಿ ಹೆಚ್ಚು ಮೌಲ್ಯವಾದವುಗಳನ್ನು ಜೇಬಿಗೆ ಇಳಿಬಿಟ್ಟು ನಡೆದುಬಿಡಬಹುದು. ಇದಕ್ಕೆ ಮೊದಲು ಅನೇಕರಿಗೆ ಕಣ್ಣಿಗೆ ಮಣ್ಣೆರಚಿದ್ದ ಅಂಚೆಚೀಟಿಗಳ ಸಂಗ್ರಹ ಜಗತ್ತಿನ ತುಂಬ ಮೋಸವೇ, ನಾಗರಾಜನ್ ಆಗತಾನೇ ಕಣ್ಣು ಬಿಡುತ್ತಿದ್ದನು.

ರಾಜಪ್ಪ ನೇರವಾಗಿ ಮಹಡಿಯಮೇಲೆ ನಾಗರಾಜನ್‌ನ ಕೊಠಡಿಗೆ ಹೋದ. ಅವನು ಆ ಮನೆಗೆ ಆಗಾಗ ಬರುತ್ತಿದ್ದವನೇ ಆದುದರಿಂದ ಅವನನ್ನು ಯಾರೂ ತಡೆಯಲಿಲ್ಲ. ರಾಜಪ್ಪ ನಾಗರಾಜನ್‌ನ ಮೇಜಿನ ಹತ್ತಿರ ಕುಳಿತುಕೊಂಡ. ಸ್ವಲ್ಪ ಹೊತ್ತಾದ ಮೇಲೆ ನಾಗರಾಜನ್‌ನ ತಂಗಿ ಕಾಮಾಕ್ಷಿ ಬಂದಳು. "ಅಣ್ಣ ಊರೊಳಗೆ ಹೋಗಿದ್ದಾನೆ," ಅವಳು ಎಂದಳು, "ಅವನ ಹೊಸ ಆಲ್ಬಮ್ ನೀನು ನೋಡಿದ್ದೀಯೇನು?"

ರಾಜಪ್ಪ ಅರ್ಥವಾಗದ ಹಾಗೆ ಗೊಣಗಿದ.

"ಅದು ನಿಜವಾಗಿ ಭರ್ಜರಿಯಾಗಿದೆ, ಅಲ್ಲ? ಶಾಲೆಯಲ್ಲಿ ಇನ್ನು ಯಾರ ಹತ್ತಿರವೂ ಅಂಥಾದ್ದು ಇಲ್ಲ ಅಂತ ನನಗನ್ನಿಸತ್ತೆ."

"ಯಾರು ಹಾಗೆ ಹೇಳಿದವರು?"

"ಅಣ್ಣ"

"ಅದೊಂದು ದೊಡ್ಡ ಆಲ್ಬಮ್, ಅಷ್ಟೇ. ಭೂತಾಕಾರವಾಗಿದ್ದ ಬಿಟ್ಟರೆ ಸಾಕೆ?"

ಕಾಮಾಕ್ಷಿ ಉತ್ತರ ಕೊಡಲಿಲ್ಲ, ಅಲ್ಲಿಂದ ಹೊರಟು ಹೋದಳು.

ಮೇಜಿನ ಮೇಲೆ ಇಟ್ಟಿದ್ದ ಪುಸ್ತಕಗಳನ್ನು ಒಮ್ಮೆ ರಾಜಪ್ಪ ನೋಡಿದ. ಮೇಜಿನ ಡ್ರಾಯರಿನ ಬೀಗವು ಕೈಗೆ ತಗಲಿತು. ತನಗೆ ಹೆಚ್ಚು ಅರಿವಿಲ್ಲದೆಯೇ ಅದನ್ನು ಎಳೆದ. ಭದ್ರವಾಗಿ ಬೀಗ ಹಾಕಿತ್ತು. ಅದನ್ನೇಕೆ ತೆಗೆಯಬಾರದು? ಪುಸ್ತಕಗಳ ಮಧ್ಯೆ ಬೀಗದಕೈ ಇತ್ತು. ರಾಜಪ್ಪ ಮೆಟ್ಟಿಲವರೆಗೆ ಹೋಗಿ ಸುತ್ತ ಕಣ್ಣು ಹೊರಳಿಸಿದ. ಯಾರೂ ಕಾಣಲಿಲ್ಲ, ಡ್ರಾಯರನ್ನು ತೆಗೆದ. ನಾಗರಾಜನ್‌ನ ಅಂಚೆ ಚೀಟಿ ಸಂಗ್ರಹ ಪುಸ್ತಕ ಮೇಲೆಯೇ ಇತ್ತು. ಮೊದಲನೆ ಪುಟವನ್ನು ತಿರುವಿ ಹಾಕಿ ಒಕ್ಕಣೆಯನ್ನು ಓದಿದ. ಅವನ ಎದೆ ಡವಡವ ಹೊಡೆದುಕೊಳ್ಳಲಾರಂಭಿಸಿತು. ಡ್ರಾಯರನ್ನು ಮುಚ್ಚಿ ಬೀಗಹಾಕಿದ. ಸಂಗ್ರಹ ಪುಸ್ತಕವನ್ನು ಚಡ್ಡಿಯೊಳಕ್ಕೆ ಸೇರಿಸಿ ಅದರ ಮೇಲೆ ಷರ್ಟನ್ನು ಇಳಿಬಿಟ್ಟ, ಸರಸರನೆ ಮೆಟ್ಟಿಲುಗಳನ್ನಿಳಿದು ಮನೆಗೆ ಓಡಿದ.

ಮನೆ ಸೇರಿದವನೇ ಸಂಗ್ರಹಪುಸ್ತಕವನ್ನು ತನ್ನ ಪುಸ್ತಕದ ಕಪಾಟಿನ ಹಿಂದೆ ಬಚ್ಚಿಟ್ಟ. ಮೈಗೆಲ್ಲ ಬೆಂಕಿಹತ್ತಿ ಉರಿಯುತ್ತಿದ್ದಂತೆನ್ನಿಸಿತು, ಗಂಟಲು ಒಣಗಿಹೋಗಿತ್ತು, ರಕ್ತ ತಲೆಯಲ್ಲಿ ಕುಟ್ಟುತ್ತಿತ್ತು.

ಕಡೆಗೂ ರಾತ್ರಿ ಎಂಟು ಗಂಟೆಗೆ ಎದುರುಮನೆಯಲ್ಲಿ ವಾಸವಾಗಿದ್ದ ಅಪ್ಪು ಬಂದು, ನಾಗರಾಜನ್‌ನ ಅಂಚೆ ಚೀಟಿ ಸಂಗ್ರಹ ಪುಸ್ತಕ ಕಾಣೆಯಾಗಿದೆ ಎಂದು ಹೇಳಿದ. ಅವನೂ ನಾಗರಾಜನ್‌ನೂ ಸಂಜೆ ಊರೊಳಗೆ ಹೋಗಿದ್ದರು, ವಾಪಸು ಬಂದಾಗ ಸಂಗ್ರಹ ಪುಸ್ತಕ ಮರೆಯಾಗಿತ್ತು!

ರಾಜಪ್ಪ ಒಂದೇ ಮಾತನ್ನೂ ಆಡಲಿಲ್ಲ, ಅಪ್ಪು ಹೊರಟು ಹೋಗಲಿ ದೇವರೇ ಎಂದು ಪ್ರಾರ್ಥನೆ ಮಾಡುತ್ತಿದ್ದ. ಅಪ್ಪು ಹೋದಮೇಲೆ ತನ್ನ ಕೊಠಡಿಗೆ ಹೋಗಿ ಚಿಲಕ ಹಾಕಿಕೊಂಡ. ಕಪಾಟಿನ ಹಿಂದಿನಿಂದ ಸಂಗ್ರಹಪುಸ್ತಕವನ್ನು ಹೊರಕ್ಕೆ ತೆಗೆದ. ಕೈ ಮರಗಟ್ಟಿತು. ಯಾರಾದರೂ ಕಿಟಕಿಯಿಂದ ನೋಡುತ್ತಿದ್ದರೆ ಗತಿ ಏನು? ಸಂಗ್ರಹಪುಸ್ತಕವನ್ನು ಮತ್ತೆ ಕಪಾಟಿನ ಹಿಂದಕ್ಕೆ ತುರುಕಿದ.

ರಾಜಪ್ಪ ಊಟವನ್ನು ಮುಟ್ಟಲೇ ಇಲ್ಲ ಎನ್ನಬೇಕು. ಮನೆಯವರಿಗೆಲ್ಲ ಆತಂಕ, ಮೈಯಲ್ಲಿ ಸ್ವಸ್ಥವಿಲ್ಲವೇ ಎಂದು ವಿಚಾರಿಸಿದರು.

ನಿದ್ರೆ ಬಂದರೆ ಸಮಾಧಾನವಾದೀತೇನೋ? ರಾಜಪ್ಪ ಹಾಸಿಗೆಯಲ್ಲಿ ಮಲಗಿದ: ಆದರೆ ನಿದ್ರೆ ದೂರವೇ ಉಳಿಯಿತು. ತಾನು ಮಲಗಿದಾಗ ಅಕಸ್ಮಾತ್ ಯಾರಿಗಾದರೂ ತಾನು ಬಚ್ಚಿಟ್ಟಿದ್ದ ಸಂಗ್ರಹಪುಸ್ತಕ ಸಿಕ್ಕಿಬಿಟ್ಟರೆ? ಎದ್ದ, ಸಂಗ್ರಹಪುಸ್ತಕವನ್ನು ಹೊರಕ್ಕೆ ತೆಗೆದು ತನ್ನ ತಲೆದಿಂಬಿನ ಕೆಳಗೆ ಇಟ್ಟುಕೊಂಡ.

ಬೆಳಗ್ಗೆ ಅಪ್ಪು ಕಾಣಿಸಿಕೊಂಡಾಗ ರಾಜಪ್ಪ ಎದ್ದೇ ಇರಲಿಲ್ಲ, ಅಪ್ಪು ಮತ್ತೆ ನಾಗರಾಜನ್‌ನ ಮನೆಗೆ ಹೋಗಿ ಆಗತಾನೆ ಬಂದಿದ್ದ.

"ನಾಗರಾಜನ್ ರಾತ್ರಿ ಎಲ್ಲ ಅಳ್ತಾ ಇದ್ದ. ಅವನ ತಂದೆ ಪೋಲೀಸರಿಗೆ ಹೇಳಿಕಳುಹಿಸಬಹುದು."

ರಾಜಪ್ಪ ಒಂದು ಮಾತನ್ನೂ ಆಡಲಿಲ್ಲ.

ನಾಗರಾಜನ್ ತಂದೆ ಪೋಲೀಸ್ ಸೂಪರಿಂಟೆಂಡೆಂಟ್ ಕಚೇರಿಯಲ್ಲಿ ಕೆಲಸಮಾಡಿದ್ದರು. ಅವರು ಕಿರುಬೆರಳು ಎತ್ತಿದರೆ ಸಾಕು, ಪೋಲೀಸ್ ಪಡೆ ಎಲ್ಲ ಸಂಗ್ರಹ ಪುಸ್ತಕವನ್ನು ಹುಡುಕಲು ಹೊರಡುತ್ತಿತ್ತು.

ರಾಜಪ್ಪನ ಅದೃಷ್ಟ ಚೆನ್ನಾಗಿತ್ತು, ಅಪ್ಪುವಿನ ತಮ್ಮ ಅಪ್ಪುವನ್ನು ಕರೆದುಕೊಂಡು ಹೋಗಲು ಬಂದ. ಅವನು ಹೋದಮೇಲೆ ರಾಜಪ್ಪ ಬಹಳ ಹೊತ್ತು ತನ್ನ ಹಾಸಿಗೆಯ ಮೇಲೇ ಕುಳಿತಿದ್ದ. ಅವನ ತಂದೆ ಬೆಳಗಿನ ಫಲಾಹಾರ ಮುಗಿಸಿ ಬೈಸಿಕಲ್ ಮೇಲೆ ಕಚೇರಿಗೆ ಹೊರಟುಹೋಗಿದ್ದರು.

ಮುಂದಿನ ಬಾಗಿಲನ್ನು ಯಾರೋ ತಟ್ಟಿದ ಶಬ್ದ. ಪೋಲೀಸರೇ ಬಂದರೋ?

ರಾಜಪ್ಪ ಸಂಗ್ರಹ ಪುಸ್ತಕವನ್ನು ತಲೆದಿಂಬಿನ ಕೆಳಗಿನಿಂದ ಥಟ್ಟನೆ ತೆಗೆದುಕೊಂಡು ಮಹಡಿಯ ಮೇಲೆ ಓಡಿದ, ಅದನ್ನು ಪುಸ್ತಕದ ಕಪಾಟಿನ ಹಿಂದೆ ತುರುಕಿದ. ಪೋಲೀಸರು ಹುಡುಕಿದರೆ ಏನು ಗತಿ? ಅದನ್ನು ಕಪಾಟಿನಿಂದ ಹೊರಕ್ಕೆ ತೆಗೆದ, ಷರ್ಟಿನೊಳಕ್ಕೆ ಸಿಕ್ಕಿಸಿಕೊಂಡು ಕೆಳಕ್ಕೆ ಬಂದ.

ಯಾರೋ ಇನ್ನೂ ಬಾಗಿಲನ್ನು ತಟ್ಟುತ್ತಿದ್ದರು. ರಾಜಪ್ಪನ ತಾಯಿ ಅಡುಗೆಮನೆಯಿಂದ, "ಯಾಕೋ ಬಾಗಿಲನ್ನು ತೆರೆದಿಲ್ಲ?" ಎಂದು ಕೂಗಿದರು. ಇನ್ನು ಕೆಲವು ಸೆಕೆಂಡುಗಳಲ್ಲಿ ಖಂಡಿತವಾಗಿ ತಾನೇ ಹೋಗಿ ಚಿಲುಕವನ್ನು ತೆಗೆಯುತ್ತಿದ್ದಳು.

ರಾಜಪ್ಪ ಮನೆಯ ಹಿಂಭಾಗಕ್ಕೆ ಓಡಿಹೋದ. ಬಚ್ಚಲುಮನೆಗೆ ಹೋಗಿ ಬಾಗಿಲನ್ನು ಹಾಕಿಕೊಂಡ. ಸ್ನಾನಕ್ಕೆ ನೀರನ್ನು ಕಾಯಿಸಲು ಬಚ್ಚಲು ಮನೆಯಲ್ಲಿ ದೊಡ್ಡ ಒಲೆ ಇತ್ತು. ರಾಜಪ್ಪ ಸಂಗ್ರಹ ಪುಸ್ತಕವನ್ನು ಉರಿಯಲ್ಲಿ ಎಸೆದ. ಸಂಗ್ರಹ ಪುಸ್ತಕ ಉರಿದುಹೋಯಿತು, ಅದರ ಜೊತೆಗೇ ಆ ಬೆಲೆಬಾಳುವ ಅಂಚೆಚೀಟಿಗಳು, ಎಲ್ಲೂ ಸಿಕ್ಕದ ಅಂಚೆಚೀಟಿಗಳು, ಉರಿದುಹೋದವು. ರಾಜಪ್ಪನ ಕಣ್ಣುಗಳ ತುಂಬ ನೀರು ತುಂಬಿತು.

ಅಮ್ಮ "ಬೇಗ ಬಾ! ನಿನ್ನನ್ನ ನೋಡುವುದಕ್ಕೆ ನಾಗರಾಜನ್ ಬಂದಿದ್ದಾನೆ" ಎಂದು ಕೂಗುತ್ತಿದ್ದರು.

ರಾಜಪ್ಪ ತನ್ನ ಚಡ್ಡಿಯನ್ನು ತೆಗೆದು ಒಂದು ಒದ್ದೆ ಚೌಕವನ್ನು ಸುತ್ತಿಕೊಂಡು ಬಚ್ಚಲಮನೆಯಿಂದ ಹೊರಕ್ಕೆ ಬಂದ. ಬೇರೆ ಷರ್ಟನ್ನು ಚಡ್ಡಿಯನ್ನು ಹಾಕಿಕೊಂಡು ಮಹಡಿಯ ಮೇಲಕ್ಕೆ ಹೋದ. ನಾಗರಾಜನ್ ಒಂದು ಕುರ್ಚಿಯಲ್ಲಿ ಕುಳಿತಿದ್ದ.

"ನನ್ನ ಸ್ಟ್ಯಾಂಪ್ ಆಲ್ಬಮ್ ಕಳೆದು ಹೋಯಿತು," ನಾಗರಾಜನ್ ಹತಾಶ ಧ್ವನಿಯಲ್ಲಿ ಹೇಳಿದ. ಅವನ ಮುಖದಲ್ಲಿ ದುಃಖ ತಾಂಡವವಾಡುತ್ತಿತ್ತು. ಗಂಟೆಗಟ್ಟಲೆ ಅತ್ತಿದ್ದುದರಿಂದ ಅವನ ಕಣ್ಣುಗಳು ಕೆಂಪಾಗಿ, ಊದಿಕೊಂಡಿದ್ದವು.

"ಅದನ್ನ ಎಲ್ಲಿಟ್ಟಿದ್ದೆ?" ರಾಜಪ್ಪ ಕೇಳಿದ.

"ಅದನ್ನ ಮೇಜಿನ ಡ್ರಾಯರಿನಲ್ಲಿಟ್ಟಿದ್ದೆ ಅನ್ನೋದು ಖಂಡಿತ. ಡ್ರಾಯರಿಗೆ ಬೀಗ ಕೂಡ ಹಾಕಿದ್ದೆ. ಸ್ವಲ್ಪ ಹೊತ್ತು ಹೊರಕ್ಕೆ ಹೋಗಿದ್ದೆ, ನಾನು ಹಿಂದಕ್ಕೆ ಬರುವ ಹೊತ್ತಿಗೆ ಅದು ಕಳೆದುಹೋಗಿತ್ತು."

ಕಣ್ಣೀರು ಅವನ ಕೆನ್ನೆಗಳ ಮೇಲೆ ಸುರಿಯಿತು. ರಾಜಪ್ಪನಿಗೆ ತಪ್ಪು ಮಾಡಿದ ಭಾವನೆ ಎಷ್ಟು ಬಲವಾಗಿತ್ತೆಂದರೆ ಅವನಿಗೆ ತನ್ನ ಸ್ನೇಹಿತನ ಕಡೆ ನೋಡುವುದಕ್ಕೆ ಆಗಲಿಲ್ಲ. "ಅಳಬೇಡ," ಎಂದು ಗೊಣಗಿದ.

ಆದರೆ ಅವನು ನಾಗರಾಜನ್‌ನನ್ನು ಸಮಾಧಾನಪಡಿಸಲು ಪ್ರಯತ್ನಿಸಿದಷ್ಟೂ ಹುಡುಗನ ಅಳು ಹೆಚ್ಚಾಯಿತು.

ರಾಜಪ್ಪ ಮೆಟ್ಟಿಲಿಳಿದು ಓಡಿದ, ಒಂದು ಕ್ಷಣದಲ್ಲಿ ಹಿಂದಕ್ಕೆ ಬಂದ. ಅವನ ಅಂಚೆಚೀಟಿಗಳ ಸಂಗ್ರಹ ಪುಸ್ತಕ ಅವನ ಕೈಗಳಲ್ಲಿತ್ತು.

"ನಾಗರಾಜನ್, ಇಗೋ ನನ್ನ ಆಲ್ಬಮ್. ಅದು ನಿನ್ನದು. ನನ್ನ ಕಡೆ ಹಾಗೆ ನೋಡಬೇಡ! ನಿಜವಾಗಿ ಹೇಳುತ್ತಿದ್ದೇನೆ. ಆ ಆಲ್ಬಮ್ ನಿನ್ನದು."

"ನೀನು ತಮಾಷೆ ಮಾಡುತ್ತಿದ್ದೀ..."

"ಇಲ್ಲ, ಇದನ್ನ ನಿನಗೇ ಕೊಡುತ್ತಿದ್ದೇನೆ. ನಿಜವಾಗಿಯೂ ಇವತ್ತಿನಿಂದ ಅದು ಸಂಪೂರ್ಣವಾಗಿ ನಿನ್ನದು. ನೀನೇ ಇಟ್ಟುಕೊ."

ನಾಗರಾಜನ್‌ಗೆ ತನ್ನ ಕಣ್ಣುಗಳನ್ನೇ ನಂಬಲು ಸಾಧ್ಯವಾಗಲಿಲ್ಲ. ರಾಜಪ್ಪ ತನ್ನ ಆಲ್ಬಮ್ ಕೊಟ್ಟುಬಿಡುವುದೇ! ಆದರೆ ರಾಜಪ್ಪ ಅವನಿಗೆ ಅದನ್ನು ತೆಗೆದುಕೊಳ್ಳುವಂತೆ ಒತ್ತಾಯ ಮಾಡುತ್ತಿದ್ದ.

"ನೀನೇನು ಮಾಡುತ್ತೀ?" ನಾಗರಾಜನ್ ಕೇಳಿದ.

"ನನಗೆ ಇನ್ನು ಅದು ಬೇಡ."

"ಒಂದು ಸ್ಟ್ಯಾಂಪೂ ಬೇಡವೇ?"

"ಬೇಡ, ಒಂದೂ ಬೇಡ."

"ಆದರೆ ಸ್ಟ್ಯಾಂಪ್‌ಗಳಿಲ್ಲದೆ ನೀನು ಹೇಗೆ ಬದುಕುತ್ತೀ?"

ರಾಜಪ್ಪನ ಕಣ್ಣುಗಳ ತುಂಬ ನೀರು.

"ಅಳಬೇಡ ರಾಜಪ್ಪ, ನೀನು ನಿನ್ನ ಆಲ್ಬಮ್ಮನ್ನು ಕೊಡಬೇಕಾಗಿಲ್ಲ, ನೀನೇ ಇಟ್ಟುಕೊ. ಅದಕ್ಕೋಸ್ಕರ ತುಂಬಾ ಶ್ರಮ ಪಟ್ಟಿದ್ದೀಯೆ."

"ಬೇಡ, ನೀನೇ ಇಟ್ಟಿಕೋ. ನಿನಗೇ ಅದು. ಅದನ್ನ ಮನೆಗೆ ತೆಗೆದುಕೊಂಡು ಹೋಗು. ದಯೆಯಿಟ್ಟು ಅದನ್ನ ತೆಗೆದುಕೊಂಡು ಹೊರಟು ಹೋಗು," ರಾಜಪ್ಪ ಅರಚಿಕೊಂಡ.

ನಾಗರಾಜನ್‌ಗೆ ಏನೂ ಅರ್ಥವಾಗಲಿಲ್ಲ. ಆಲ್ಬಮ್ಮನ್ನು ತೆಗೆದುಕೊಂಡು ಕೆಳಕ್ಕಿಳಿದು ಬಂದ. ರಾಜಪ್ಪ ತನ್ನ ಷರ್ಟಿನ ಕೊನೆಯಿಂದ ಕಣ್ಣುಗಳನ್ನು ಒರೆಸಿಕೊಳ್ಳುತ್ತ ಅವನ ಹಿಂದೆಯೇ ಬಂದ.

ಅವರು ಬಾಗಿಲಿನ ಹತ್ತಿರ ನಿಂತರು. "ಧನ್ಯವಾದಗಳು," ನಾಗರಾಜನ್ ಹೇಳಿದ, "ನಾನು ಹೋಗುತ್ತೇನೆ."

ನಾಗರಾಜನ್ ರಸ್ತೆಗೆ ಕಾಲಿಡುತ್ತಲೇ ರಾಜಪ್ಪ ಅವನನ್ನು ಕೂಗಿಕರೆದ

ನಾಗರಾಜನ್ ತಿರುಗಿ ನೋಡಿದ.

"ದಯೆಯಿಟ್ಟು ... ದಯೆಯಿಟ್ಟು ನನಗೆ ಇವತ್ತು ರಾತ್ರಿಯ ಮಟ್ಟಿಗೆ ಆಲ್ಬಮ್ ಕೊಟ್ಟಿರು. ನಾಳೆ ಬೆಳಿಗ್ಗೆ ನಿನಗೆ ಹಿಂದಕ್ಕೆ ಕೊಟ್ಟುಬಿಡುತ್ತೇನೆ."

ನಾಗರಾಜನ್ ಒಪ್ಪಿದ, ಹೊರಟು ಹೋದ.

ರಾಜಪ್ಪ ಮೆಟ್ಟಲು ಹತ್ತಿ ಹೋಗಿ ತನ್ನ ಕೊಠಡಿಯ ಬಾಗಿಲಿನ ಚಿಲುಕ ಹಾಕಿದ. ಆಲ್ಬಮನ್ನು ಗಟ್ಟಿಯಾಗಿ ಹಿಡಿದುಕೊಂಡು, ಹೃದಯ ಕಿತ್ತುಬರುತ್ತದೆ ಎನ್ನುವಂತೆ ಅತ್ತುಬಿಟ್ಟ.

# ಅಪ್ಪುವಿನ ಕಥೆ

ರಾಂಧಿ ಸೋಮರಾಜು

ಮುತ್ತಿನ ದ್ವೀಪ ಎನ್ನುವ ಹೆಸರಿನ ಸಣ್ಣ ಹಳ್ಳಿಯೊಂದಿತ್ತು. ಆದರೆ ಅಲ್ಲಿ ಮುತ್ತುಗಳನ್ನು ಸಂಗ್ರಹಿಸುತ್ತಲೂ ಇರಲಿಲ್ಲ, ಅದು ದ್ವೀಪವೂ ಅಲ್ಲ. ಪ್ರಾಯಶಃ, ಆ ಹಳ್ಳಿ ಬಹಳ ದೂರದಲ್ಲಿದ್ದು ಒಂಟಿಯಾಗಿದ್ದು ಅದನ್ನು ತಲುಪುವುದೇ ಕಷ್ಟವಾಗಿದ್ದುದರಿಂದ ಆದಕ್ಕೆ ಆ ಹೆಸರು ಬಂದಿತ್ತು. ಬಹು ಹತ್ತಿರದ ಊರು ಸಹ ಮೈಲಿಗಳಾಚೆ ಇತ್ತು - ಗುಡೆಮ್‌ಗೆ ಎರಡು ಮೈಲಿ ನಡೆಯಬೇಕಾಗಿತ್ತು, ಪಲೆಮ್‌ಗೆ ದೋಣಿಯಲ್ಲಿ ರಾತ್ರಿ ಪ್ರಯಾಣ, ಗೋರ್ತಿಪಡುಗೆ ಒಂದು ಗಂಟೆ ಕುದುರೆಗಾಡಿಯ ಪ್ರಯಾಣ, ಅನಂತರ ಬಸ್‌ನಲ್ಲಿ ಮೂರು ಗಂಟೆ. ರೈಲಿನಲ್ಲಿ ಹೋದರೆ ನಾಲ್ಕು ನೂರು ಮೈಲಿ ದೂರ.

ಮುತ್ತಿನ ದ್ವೀಪದಲ್ಲಿ ಅಪ್ಪು ಎನ್ನುವ ಹುಡುಗನಿದ್ದ. ಪುಟ್ಟ ಹಳ್ಳಿಯಲ್ಲೇ ವಾಸವಾಗಿದ್ದರೂ ಅಪ್ಪುವಿನ ರೀತಿ, ದುಂದುಗಾರಿಕೆ ಎಲ್ಲ ಪಟ್ಟಣ ವಾಸಿಯದು. ಹಣದ ಬೆಲೆಯೇ ಅವನಿಗೆ ತಿಳಿಯದು, ಹಣವನ್ನು ನಿಷ್ಪ್ರಯೋಜಕ ರೀತಿಗಳಲ್ಲಿ ಖರ್ಚುಮಾಡುತ್ತಿದ್ದ. ಬೆಳಿಗ್ಗೆ ಹಳ್ಳಿಯ ಚಾ ಅಂಗಡಿಗೆ ಹೋಗಿ ಎಲ್ಲ ಬಗೆಗಳ ರುಚಿಯಾದ ತಿಂಡಿಗಳನ್ನು ತಿನ್ನುತ್ತಿದ್ದ. ಪ್ರತಿಯೊಬ್ಬ ರಸ್ತೆ ವ್ಯಾಪಾರಿಯನ್ನು ಕರೆದು ಅವನು ಏನೇ ಮಾರುತ್ತಿರಲಿ, ಕೊಂಡುಕೊಳ್ಳುತ್ತಿದ್ದ. ಹೊಟ್ಟೆ ಊದಿಕೊಳ್ಳುವವರೆಗೆ ಆಹಾರವನ್ನು ಅಡಚಿಕೊಳ್ಳುತ್ತಿದ್ದ. ಸಂಜೆ ಹಳ್ಳಿಯ ಚೌಕಕ್ಕೆ ಹೋಗಿ ಮತ್ತೆ ಗದಗುತ್ತಿದ್ದ.

ಅಪ್ಪು ಹೊಟ್ಟೆಬಾಕನಷ್ಟೇ ಅಲ್ಲ, ಪೋಕಿಲಾಲನೂ ಆಗಿದ್ದ. ಪ್ರತಿ ದಿನವೂ ಆಟವಾಡುವಾಗ ಎಚ್ಚರಗೇಡಿತನದಿಂದ ಬಟ್ಟೆಗಳನ್ನು ಹರಿದುಕೊಂಡು ಹೊಸ ಬಟ್ಟೆ ಬೇಕೆಂದು ಕೇಳುತ್ತಿದ್ದ. ಇನ್ನೂ ಕೇಡೆಂದರೆ, ಸದಾ ಪುಸ್ತಕಗಳನ್ನೂ ಪೆನ್ಸಿಲ್‌ಗಳನ್ನೂ ಕಳೆದುಕೊಳ್ಳುತ್ತಿದ್ದ ಅಥವಾ ಎಲ್ಲಿಯೋ ಇಟ್ಟುಬಿಡುತ್ತಿದ್ದ. ಹೊಸದಾಗಿ ಕಾಗದ ಪೆನ್ಸಿಲ್ ಮೊದಲಾದ ಬರವಣಿಗೆಯ ಸಾಮಗ್ರಿಗಳು ಬೇಕೆಂದು ಕೇಳುತ್ತಿದ್ದ. ದುಡ್ಡಿಗಾಗಿ ಅಪ್ಪು ಪ್ರತಿ ದಿನವೂ ತಾಯಿಯನ್ನು ಗೋಳಾಡಿಸುತ್ತಿದ್ದ. ಹಣವೆಲ್ಲ ಖರ್ಚಾಗಿಹೋದರೆ ಇನ್ನಷ್ಟನ್ನು ಕಿತ್ತುಕೊಳ್ಳಬಹುದೆಂದು ಅವನಿಗೆ ಗೊತ್ತಿತ್ತು.

ಅಪ್ಪುವಿನ ತಂದೆತಾಯಿಗೆ ಅವನೊಬ್ಬನೇ ಮಗ. ಅವರು ಅವನ ಕಯಾಲಿಗಳನ್ನೆಲ್ಲ ತೃಪ್ತಿಪಡಿಸಿದರು. ಆದರೆ ಅವನು ಮನಸ್ವೀ ಹಣವನ್ನು ಹಾಳು ಮಾಡಲು ಪ್ರಾರಂಭಿಸಿದಾಗ ಅವನ ತಂದೆತಾಯಿಗಳಿಗೆ ಆತಂಕವಾಯಿತು. ಅವನ ತಂದೆ ಅವನಿಗೆ ಛೀಮಾರಿ ಹಾಕಲು ಪ್ರಯತ್ನಿಸಿದರು. ಆದರೆ ಅಪ್ಪು ಅದಕ್ಕೆ ಲಕ್ಷ್ಯವನ್ನೆ ಕೊಡಲಿಲ್ಲ, ಗಮನವಿಟ್ಟು ಕೇಳುವವನಂತೆ ನಟಿಸಿದ. ಆದರೆ ಅವನ ತಂದೆಯ ಮಾತುಗಳು ಒಂದು ಕಿವಿಯಲ್ಲಿ ಒಳಕ್ಕೆ ಹೋಗಿ ಇನ್ನೊಂದು ಕಿವಿಯಿಂದ ಹೊರಕ್ಕೆ ಬಂದವು ಅಷ್ಟೆ.

ಅಲ್ಲದೆ ಅಪ್ಪು ಸಿಗರೇಟ್ ಸೇದುವುದನ್ನೂ ಪ್ರಾಂಭಿಸಿದ. ಅವನ ತಂದೆಗೆ ಈ ವಿಷಯ ತಿಳಿದಾಗ ಅವರು ಬಹು ಕೋಪಮಾಡಿಕೊಂಡು ಅಪ್ಪುವಿಗೆ ಬಯ್ದರು. ಅಪ್ಪು ಜೋರಾಗಿ ಅಳಲು ಪ್ರಾರಂಭಿಸಿದ; ಅವನ ತಾಯಿಗೆ ಬಹಳ ತಳಮಳವಾಗಿ ಅವನನ್ನು ತಬ್ಬಿಕೊಂಡು ಸಮಾಧಾನ ಮಾಡಿದರು. ಆಮೇಲೆ ಆಕೆ ಅವನಿಗೆ ಸ್ವಲ್ಪ ಹಣಕೊಟ್ಟು ಆಟವಾಡಲು ಕರೆದುಕೊಂಡು ಹೋದರು. ಅಪ್ಪುವಿನ ತಂದೆಗೆ ಬಹಳ ದುಃಖವಾಯಿತು. ತನ್ನ ಮಗನ ದುರಭ್ಯಾಸಗಳಿಗೂ ದುಂದು ಖರ್ಚಿಗೂ ತಾನೇ ಕಾರಣ ಎಂದು ಬೇಸರಪಟ್ಟುಕೊಂಡರು. ಪರಿಸ್ಥಿತಿಯನ್ನು ಸುಧಾರಿಸಲು ಸಾಧ್ಯವಿಲ್ಲದಷ್ಟು ತಡವಾಯಿತೆ? ಬಹಳ ಯೋಚನೆ ಮಾಡಿ ಅಪ್ಪುವಿನ ತಂದೆ

ಅವರ ಮಗನ ಉಪಾಧ್ಯಾಯರ ಸಲಹೆ ಮತ್ತು ನೆರವು ಪಡೆಯಲು ನಿಶ್ಚಯಿಸಿದರು. ಉಪಾಧ್ಯಾಯರು ತಮ್ಮ ಕೈಲಾದದ್ದನ್ನೆಲ್ಲ ಮಾಡುವುದಾಗಿ ಭರವಸೆ ನೀಡಿದರು.

ಒಂದು ದಿನ ಉಪಾಧ್ಯಾಯರು ಅಪ್ಪುವಿಗೆ ಹೇಳಿಕಳುಹಿಸಿದರು. ಪ್ರೀತಿಯಿಂದ ಅವನ ಬೆನ್ನುತಟ್ಟಿ ಮಧ್ಯಾಹ್ನ ತಮ್ಮ ಮನೆಗೆ ಬರುವಂತೆ ಅಪ್ಪುವಿಗೆ ಹೇಳಿದರು. ಅಪ್ಪುವಿಗೆ ಬಹಳ ಆತಂಕವಾಯಿತು. ಉಪಾಧ್ಯಾಯರು ತನ್ನನ್ನು ನೋಡಬೇಕೆಂದು ಏಕೆ ಹೇಳಿದರು? ತರಗತಿಯ ತನ್ನ ಓದು ಬರಹದ ವಿಷಯವಾಗಿಯೆ? ಅವನನ್ನು ಮಗ್ಗಿಯ ಕೋಷ್ಟಕದ ಬಗ್ಗೆ ಪ್ರಶ್ನೆ ಕೇಳಲು ಉದ್ದೇಶಿಸಿದ್ದರೆ?

ಅಪ್ಪು ಅನುಮಾನಿಸುತ್ತ ಬಾಗಿಲ ಹತ್ತಿರ ನಿಂತ. ಉಪಾಧ್ಯಾಯರು ಒಳಕ್ಕೆ ಬರುವಂತೆ ಕರೆದರು, ಮೃದುವಾಗಿ ಮಾತನಾಡಿದರು, ಕೂಡಿಸಿದರು. ಉಪಾಧ್ಯಾಯರ ರೀತಿಯಿಂದ ಅಪ್ಪುವಿಗೆ ಮತ್ತೆ ಸ್ವಲ್ಪ ಧೈರ್ಯ ಬಂದಿತು, ಹೃದಯದ ಬಡಿತ ಎಂದಿನಂತಾಯಿತು, ನಿರಾಳವಾಗಿ ಕುಳಿತ.

"ಮುಂದಿನ ತಿಂಗಳು ವರ್ಷದ ಮಧ್ಯದ ಪರೀಕ್ಷೆಗಳಿವೆ, ಅಪ್ಪು, ನೀನು ಚೆನ್ನಾಗಿ ಸಿದ್ಧಮಾಡಿಕೊಂಡಿದ್ದೀಯಲ್ಲ?" ಉಪಾಧ್ಯಾಯರು ಮೃದುವಾಗಿ ಕೇಳಿದರು. ಅಪ್ಪು ತಲೆಯಾಡಿಸಿದ. ಉಪಾಧ್ಯಾಯರ ಮನಸ್ಸಿನಲ್ಲೇನಿದೆ ಎಂದು ಕೇಳಿಕೊಂಡ. ಆದರೆ ಉಪಾಧ್ಯಾಯರು ವೃತ್ತಪತ್ರಿಕೆಯೊಂದನ್ನು ಎತ್ತಿಕೊಂಡು ಓದಲು ಪ್ರಾರಂಭಿಸಿದರು.

ಅಪ್ಪು ಸುಮ್ಮನೆ ಸುತ್ತಲೂ ಕಣ್ಣಾಡಿಸಿದ. ವೃತ್ತಪತ್ರಿಕೆಯ ಹಿಂದಿನ ಪುಟದಲ್ಲಿದ್ದ ಒಂದು ಚಿತ್ರ ಅವನಿಗೆ ಕಂಡಿತು. ಆಕಾಶನೌಕೆಯೊಂದನ್ನು ಹಾರಿಸುವ ಚಿತ್ರ ಅದು. ಚಿತ್ರವನ್ನೆ ಕಣ್ಣಿಟ್ಟು ನೋಡುತ್ತಿದ್ದ ಅಪ್ಪುವಿಗೆ ತಾನೇ ಕ್ಷಿಪಣಿಯಲ್ಲಿ ಕುಳಿತಿದ್ದೇನೆ, ಆಕಾಶಕ್ಕೆ ತನ್ನನ್ನು ಹಾರಿಸಲಾಗುತ್ತಿದೆ ಎಂದೇ ಭಾಸವಾಯಿತು. ಅಪ್ಪುವಿಗೆ ರೋಮಾಂಚನವಾಯಿತು. ಅವನ ತಲೆಯ ತುಂಬ ಪ್ರಶ್ನೆಗಳು ಮುತ್ತಿದ್ದವು, ಆದರೆ ಪ್ರಶ್ನೆಗಳನ್ನು ಕೇಳಲು ಅವನು ಹಿಂದೆಗೆದ.

ಅಪ್ಪು ಹೊತ್ತಿಗೆ ಸರಿಯಾಗಿ ಉಪಾಧ್ಯಾಯರು ತಲೆ ಎತ್ತಿ ಅಪ್ಪುವಿನ ಕಡೆ ನೋಡಿದರು. "ಏನಾದರೂ ಕೇಳಬೇಕು ಅಂತ ಇದ್ದೀಯೇನು?"

"ಸಾ...ರ್...ನಿಜವಾಗಿ ಚಂದ್ರಗ್ರಹಕ್ಕೆ ಹೋಗುವುದಕ್ಕೆ ನಮಗೆ ಸಾಧ್ಯವೆ?" ಕಣ್ಣುಗಳು ಹೊಳೆಯುತ್ತಿರುವಂತೆ, ಅಪ್ಪು ಕೇಳಿದ.

"ಎಂದರೆ, ನೀನು ಪತ್ರಿಕೆಯಲ್ಲಿನ ಚಿತ್ರ ನೋಡಿದಿ ಅಂತ ಆಯಿತು. ಅದಕ್ಕೆ ಕ್ಷಿಪಣಿ ಅಂತ ಹೆಸರು, ಅದು ಮನುಷ್ಯನನ್ನ ಚಂದ್ರಗ್ರಹಕ್ಕೆ ಕರೆದುಕೊಂಡು ಹೋಗುತ್ತದೆ. ಅಮೆರಿಕನರು ಮಾಡಿದ್ದು ಅದು."

ಅಪ್ಪುವಿನ ಮನಸ್ಸಿನಲ್ಲಿ ಹಲವಾರು ಆಲೋಚನೆಗಳು ಹೊಳೆದವು. ಅವನ ತಲೆಯ ತುಂಬ ಕನಸುಗಳು.

"ಕ್ಷಿಪಣಿಯಲ್ಲಿ ಪ್ರಯಾಣ ಮಾಡುವುದಕ್ಕೆ ಅಮೆರಿಕಕ್ಕೇ ಹೋಗಬೇಕೆ?" ಅವನು ಕೇಳಿದ.

"ಹೌದು ಹೌದು."

"ಅಮೆರಿಕ ಇಲ್ಲಿಂದ ಎಷ್ಟು ದೂರ ಸರ್?"

"ಇಲ್ಲಿಂದ ಸುಮಾರು ಹತ್ತು ಸಾವಿರ ಮೈಲಿ. ವಿಮಾನದಲ್ಲಿ ಹೋದರೆ ಎರಡು ದಿನದ ಪ್ರಯಾಣ, ಹಡಗಿನಲ್ಲಿ ಸುಮಾರು ಮೂರು ವಾರ."

"ವಿಮಾನವನ್ನು ಹತ್ತುವುದೆಲ್ಲಿ? ಮುತ್ತಿನ ದ್ವೀಪದಲ್ಲೆ?"

ಉಪಾಧ್ಯಾಯರು ಮುಗುಳ್ನಗೆ ನಕ್ಕರು. "ಇಲ್ಲ, ಅಂತರರಾಷ್ಟ್ರೀಯ ವಿಮಾನನಿಲ್ದಾಣಗಳೆಲ್ಲ ಮದರಾಸು, ಮುಂಬಯಿ ಅಂತಹ ದೊಡ್ಡ ನಗರಗಳಲ್ಲಿ ಮಾತ್ರ ಇವೆ. ವಿಮಾನ ಪ್ರಯಾಣ ಅಂದರೆ ಬಹಳ ಹಣ ಖರ್ಚು, ಗೊತ್ತಲ್ಲ?"

ಅಪ್ಪುಗೆ ಬಹು ಉದ್ವೇಗವಾಯಿತು. ಅವನ ತುಟಿಗಳಿಂದ ಪ್ರಶ್ನೆಗಳು ಉದುರಿದವು. "ವಿಮಾನದಲ್ಲಿ ಪ್ರಯಾಣಮಾಡುವುದಕ್ಕೆ ಎಷ್ಟು ಹಣ ಬೇಕು?"

"ತುಂಬಾ ಹಣ ಬೇಕು. ಪ್ರಪಂಚದಲ್ಲೆಲ್ಲ ಸುತ್ತಾಡಿ ಅದರ ಅದ್ಭುತಗಳನ್ನೆಲ್ಲ ನೋಡಬೇಕಾದರೆ ಮನುಷ್ಯ ಹಣವನ್ನ ಎಚ್ಚರದಿಂದ ಖರ್ಚುಮಾಡಿ ಉಳಿಸಬೇಕು."

"ಖಚಿತವಾಗಿ ಎಷ್ಟು ಹಣ ಬೇಕು, ಸರ್?" ಅಪ್ಪು ಮತ್ತೆ ಕೇಳಿದ.

ಉಪಾಧ್ಯಾಯರಿಗೆ ಸಂತೋಷವಾಯಿತು. "ಸುತ್ತಾಡಿ ಪ್ರಪಂಚವನ್ನು ನೋಡಬೇಕು ಅಂತ ನಿನಗನ್ನಿಸುತ್ತ ದೆಯೆ? ಈಗಲೇ ಹಣ ಉಳಿಸಲು ಪ್ರಾರಂಭಿಸುವುದು ಒಳ್ಳೆಯದು. ದೊಡ್ಡವನಾದಾಗ ಹೋಗಬಹುದು. ಗೊತ್ತಲ್ಲ ಮಗು, ಪಾಲೆಂಗೆ ದೋಣಿಯಲ್ಲಿ ಹೋಗುವುದಕ್ಕೂ ಕಾಲು ರೂಪಾಯಿ ಖರ್ಚು ಮಾಡಬೇಕು!"

"ನನಗೆ ಗೊತ್ತು ಸರ್. ಗೊರ್ತಿವದುಗೆ ಕುದುರೆಗಾಡಿಯಲ್ಲಿ ಹೋಗೋದಕ್ಕೆ ಅರ್ಧ ರೂಪಾಯಿ, ಬಸ್‌ನಲ್ಲಿ ಊರಿಗೆ ಹೋಗೋದಕ್ಕೆ ಒಂದೂವರೆ ರೂಪಾಯಿ ಖರ್ಚಾಗುತ್ತದೆ."

"ಪ್ರಯಾಣ ಅಂದರೆ ಬಹಳ ಖರ್ಚು ಕಣಪ್ಪ. ಮುಂಬಯಿ ತಲಪುವುದಕ್ಕೆ ಮೂರುದಿನ ಬೇಕು. ರೈಲಿನ ಟಿಕೆಟ್‌ಗೇ ಎಷ್ಟು ಹಣ ಬೇಕು ಯೋಚಿಸು!"

ಅಪ್ಪು ಮುಗ್ಧತೆಯಿಂದ ಕೇಳಿದ, "ಒಂದು ನೂರು ರೂಪಾಯಿ ಸಾಕೆ?"

ಉಪಾಧ್ಯಾಯರು ನಕ್ಕುಬಿಟ್ಟರು.

"ಅಮೆರಿಕಕ್ಕೆ ಬಿಟ್ಟಿ ಟಿಕೆಟ್ ಯಾರೂ ಕೊಡುವುದಿಲ್ಲಪ್ಪ ಹುಡುಗ. ನಿನ್ನ ಹತ್ತಿರ ಆರೇಳು ಸಾವಿರ ರೂಪಾಯಿ ಇರಬೇಕು. ನಿನ್ನ ಸಂಸಾರದ ಆಸ್ತಿ ಎಲ್ಲ ಸೇರಿಸಿದರೂ ಅಷ್ಟು ಆಗುವುದಿಲ್ಲ. ಕ್ಷಿಪಣಿಯಲ್ಲಿ ಹೋಗುವುದಕ್ಕೆ ಕೆಲವು ಲಕ್ಷ ರೂಪಾಯಿಗಳೇ ಬೇಕು!"

ಅಪ್ಪುವಿಗೆ ಸಂಪೂರ್ಣವಾಗಿ ನಿರಾಸೆಯಾಯಿತು. ಅವನಿಗೆ ಅಷ್ಟೊಂದು ಹಣ ಹೇಗೆ ಬರಬೇಕು?

"ಇನ್ನೊಂದು ರೀತಿ ಇದೆ, ಮಗು," ಉಪಾಧ್ಯಾಯರು ಎಂದರು.

ಅಪ್ಪುವಿನ ಮುಖಕ್ಕೆ ಕಳೆ ಬಂದಿತು.

"ನೀನು ಕಷ್ಟಪಟ್ಟು ಓದಿ ಪರೀಕ್ಷೆಯಲ್ಲಿ ಚೆನ್ನಾಗಿ ಅಂಕಗಳನ್ನು ತೆಗೆದುಕೊಂಡರೆ ಸರ್ಕಾರ ನಿನ್ನ ಪ್ರಯಾಣಕ್ಕೆ ಹಣ ಕೊಡಬಹುದು. ಆದಾದಮೇಲೂ, ಮುಂದಿನ ಓದಿಗೆ ತುಂಬಾ ಹಣ ಬೇಕಾಗುತ್ತದೆ" ಉಪಾಧ್ಯಾಯರು ಮುಂದುವರೆಸಿದರು. "ಮಗೂ, ಹಣಕ್ಕೆ ಬೆಲೆ ಉಂಟು. ಏನು ಮಾಡುವುದಕ್ಕೂ ಹಣ ಬೇಕು."

ಅಪ್ಪು ಮೌನವಾಗಿದ್ದ. ಅವನು ಗಾಢ ಯೋಚನೆಯಲ್ಲಿ ಮುಳುಗಿದ್ದ.

"ಹಣ ಉಳಿಸುವುದನ್ನು ಪ್ರಾರಂಭಿಸುವಂತೆ ನಿಮ್ಮ ತಂದೆಗೆ ಹೇಳು" ಉಪಾಧ್ಯಾಯರು ಮಾತನ್ನು ಮುಂದುವರೆಸಿದರು. "ಅವರು ಹಣವನ್ನು ವ್ಯರ್ಥವಾಗಿ ಖರ್ಚು ಮಾಡುವುದು ಬೇಡ. ನಿನ್ನ ಓದಿಗೆ, ನಿನ್ನ ಭವಿಷ್ಯಕ್ಕೆ ಅವರು ಪೈಸೆಪೈಸೆಯನ್ನು ಉಳಿಸಬೇಕಾಗುತ್ತದೆ. ಹೇಳು ಮಗು, ನಿಮ್ಮ ತಂದೆ ಹಣವನ್ನು ಹಾಳು ಮಾಡುತ್ತಾರೆಯೇ?"

ಅಪ್ಪುವಿಗೆ ತಲೆ ಎತ್ತಲು ಸಾಧ್ಯವಾಗಲಿಲ್ಲ. ಪಶ್ಚಾತ್ತಾಪದಿಂದ ಮನಸ್ಸು ತುಂಬಿಹೋಯಿತು. ಅವನ ಕೊಳಕಾದ ಬಟ್ಟೆಗಳು, ಅವನ ಹರಿದುಹೋದ ಪುಸ್ತಕಗಳು, ಹೊಟ್ಟೆಬಾಕತನ ಎಲ್ಲ ನೆನಪಾದವು. ಅವನ ಕಣ್ಣುಗಳಲ್ಲಿ ನೀರು ತುಂಬಿತು.

ಸಣ್ಣ ಹಳ್ಳಿ ಮುತ್ತಿನ ದ್ವೀಪದಲ್ಲಿ ಅವತ್ತು ಒಂದು ಸಣ್ಣ ಮುತ್ತು ಹೊಳೆಹೊಳೆಯಿತು.

# ಅಹಂಕಾರದ ಬೆಲೆ

ಸಿರಾಜ್ ಅನ್ವರ್

ನಿಮಗೇ ಗೊತ್ತಿರುವಂತೆ, ಒಂದು ಮುತ್ತು ಎಷ್ಟು ಬೆಲೆ ಬಾಳಬಹುದೆಂದರೆ ಅದಕ್ಕೆ ಬೆಲೆ ಕಟ್ಟುವುದಕ್ಕೆ ಸಾಧ್ಯವಿಲ್ಲ ಎನ್ನುತ್ತಾರೆ. ಸಮುದ್ರದ ತಳದ ತಮ್ಮ ಚಿಪ್ಪಿನಲ್ಲಿ ವಾಸಿಸುವ ಸಿಂಪಿಗಳೊಳಗೆ ಮುತ್ತುಗಳು ರೂಪತಾಳುತ್ತವೆ. ಇದು ಅಂತಹ ಒಂದು ಸಿಂಪಿಯ ಕಥೆ.

ಈ ಸಿಂಪಿ ತಾನೇ ಪ್ರಪಂಚದಲ್ಲೆಲ್ಲ ಬಹು ಮುಖ್ಯವಾದ ಪ್ರಾಣಿ ಎಂದುಕೊಂಡು ಬಿಟ್ಟಿತ್ತು, ಅದರಿಂದ ತನ್ನ ವಿಷಯದಲ್ಲಿ ಹೆಮ್ಮೆ ಪಡಲು ಒಳ್ಳೆಯ ಕಾರಣವೇ ಇದೆ ಎಂದು ಸಿಂಪಿ ಭಾವಿಸಿತ್ತು.

ಒಂದು ದಿನ ಸಮುದ್ರದಲ್ಲಿ ಭಯಂಕರ ಚಂಡಮಾರುತ ಎದ್ದಿತು. ಅಲೆಗಳು ಎತ್ತರವಾಗಿ, ಕೆರಳಿದಂತಿದ್ದವು; ಮಳೆಗಾಳಿಗಳು ಎಷ್ಟು ಹೆದರಿಸುವಂತಿದ್ದುವೆಂದರೆ ನಮ್ಮ ಗೆಳೆಯ ಸಿಂಪಿ ತನ್ನ ದುರ್ಬಲ ಚಿಪ್ಪಿನ ಮುಚ್ಚಳವನ್ನು ಭದ್ರವಾಗಿ ಮುಚ್ಚಿ ಸಮುದ್ರದ ತಳದಲ್ಲೆ ಉಳಿಯಿತು. ಆದರೂ, ಅಲೆಗಳು ಎಷ್ಟು ಬಲಿಷ್ಠವಾಗಿದ್ದುವೆಂದರೆ ಸಿಂಪಿಯ ನಿರ್ಧಾರ ಏನೇ ಇರಲಿ ಅದನ್ನೂ ಅದರ ಚಿಪ್ಪನ್ನೂ ಅವು ಎತ್ತಿ ತೀರಕ್ಕೆ ಎಸೆದವು. ತಾನು ಸಮುದ್ರತೀರದಲ್ಲಿರುವುದನ್ನು ಕಂಡು ಅದು ಎಚ್ಚರಿಕೆಯಿಂದ ತನ್ನ ಚಿಪ್ಪಿನ ಮುಚ್ಚಳವನ್ನು ತೆಗೆಯಿತು, ಕಿಂಡಿಯಲ್ಲಿ ಹೊರಗಿನ ಜಗತ್ತನ್ನು ಇಣಿಕಿನೋಡಿತು. ಸುತ್ತಮುತ್ತ ಇಣಿಕಿನೋಡುತ್ತಿದ್ದಾಗಲೇ ಮತ್ತೊಂದು ದೊಡ್ಡ ಅಲೆ ಅದನ್ನು ಎತ್ತಿ ಮರಳಿನ ಮೇಲೆ ಇನ್ನೂ ಅತ್ತಿತ್ತ ಎಸೆಯಿತು. ಇದು ನಿಜವಾಗಿ ಭಯವನ್ನುಂಟುಮಾಡುವ ಸಂಗತಿ! ಅಲೆಗಳು ಅದರ ಮೇಲೆ ಹರಿದವು. ಅದನ್ನು ಉರುಳಾಡಿಸಿದವು, ಆದರೆ ಯಾವುದೂ ಅದನ್ನು ಮತ್ತೆ ಸಮುದ್ರಕ್ಕೆ ಸೆಳೆದುಕೊಳ್ಳಲು ಶಕ್ತವಾಗಲಿಲ್ಲ; ಬಡಪಾಯಿ ಸಿಂಪಿ ಇದ್ದ ಕಡೆಯೇ ಉಳಿಯಿತು. ಮತ್ತೆ ಸಮುದ್ರವನ್ನು ಸೇರಲು ಮಾರ್ಗವೇ ಇರಲಿಲ್ಲ, ಸಿಂಪಿಗೆ ಬಹಳ ಸಿಟ್ಟು ಬಂದಿತು.

ತೀರದ ಬಳಿ ಒಂದು ಸಣ್ಣ ಮರವಿತ್ತು. ಕಾಗೆಯೊಂದು ಬಹಳ ಹೊತ್ತು ಅದರ ಮೇಲೆ ಕುಳಿತು ಸಿಂಪಿಯ ಅವಸ್ಥೆಯನ್ನು ನೋಡುತ್ತಿತ್ತು. ಕಡೆಗೆ ಅದು ಇಳಿದು ಬಂದು ತನ್ನ ಕೊಕ್ಕಿನಿಂದ ಚಿಪ್ಪನ್ನು ತಟ್ಟಿತು. "ಯಾರು ಒಳಗೆ? ಬಾಗಿಲನ್ನು ತೆರೆಯಿರಿ," ಒರಟಾಗಿ ಹೇಳಿತು.

ಸಿಂಪಿಗೆ ಅಸಮಾಧಾನವಾಯಿತು. ತನಗೆ ತಾನೇ, "ಯಾವನೋ ನಯನಾಜೂಕಿಲ್ಲದ ದರಿದ್ರದವನು ಬಂದು ನನಗೆ ತೊಂದರೆ ಮಾಡುತ್ತಿದ್ದಾನೆ" ಎಂದು ಹೇಳಿಕೊಂಡು, "ಯಾರದು?" ಎಂದು ಗಟ್ಟಿಯಾಗಿ ಕೂಗಿ ಕೇಳಿತು.

"ನಾನೊಬ್ಬ ದರಿದ್ರನಲ್ಲ, ನಾನೊಂದು ಕಾಗೆ, ಅಲ್ಲದೆ ಬುದ್ಧಿವಂತ ಕಾಗೆ. ಬಾಗಿಲು ತೆರೆದು ಹೊರಕ್ಕೆ ಬಾ."

"ನಾನು ಯಾಕೆ ಹೊರಕ್ಕೆ ಬರಬೇಕು?"

"ಒಂದಿಷ್ಟು ಹರಟೆ ಹೊಡೆಯುವುದಕ್ಕಷ್ಟೆ" ಕಾಗೆ ನಯವಾಗಿ ಹೇಳಿತು.

"ಹರಟೆ ಹೊಡೆಯಲು ನನಗೆ ಸಮಯವಿಲ್ಲ - ನಾನು ಹೊರಕ್ಕೆ ಬರುವುದೂ ಇಲ್ಲ"

"ಸರಿ ಹಾಗಾದರೆ, ಆದರೆ ನೀನು ಇಲ್ಲೇನು ಮಾಡುತ್ತಿದ್ದೀ?"

"ನನಗೆ ಮುತ್ತು ಮಾಡುವುದರಲ್ಲಿ ಬಿಡುವೇ ಇಲ್ಲ, ಅಲ್ಲದೆ ಅದೇನೇ ಇದ್ದರೂ, ನಿನ್ನಂತಹ ಅನಿಷ್ಟ ಕುರೂಪಿಯ ವಿಷಯ ನಾನೇಕೆ ತಲೆಕೆಡಿಸಿಕೊಳ್ಳಬೇಕು?" ಬಹು ದೊಡ್ಡಸ್ತಿಕೆಯಿಂದ ಮೆರೆಯುತ್ತ ಸಿಂಪಿ ಹೇಳಿತು.

"ಓಹೋ, ಎಷ್ಟು ದೊಡ್ಡಸ್ತಿಕೆ," ಕಾಗೆ ನಕ್ಕು ಬಿಟ್ಟಿತು. "ಗೆಳೆಯಾ, ನಾನು ನಿನ್ನನ್ನು ಕೇಳಬೇಕು ಅಂತ ಇದ್ದದ್ದು ಆಕಾರ ಮತ್ತು ಗಾತ್ರದ ವಿಷಯದ ಬಗ್ಗೆ ಒಂದಿಷ್ಟು ಪ್ರಶ್ನೆಗಳನ್ನು ಮಾತ್ರ; ಜೊತೆಗೆ, ಹೊರಗಿರುವ ವಿಶಾಲವಾದ ಜಗತ್ತಿನ ವಿಷಯ ನಿನಗೆ ಕೆಲವು ಸಂಗತಿಗಳನ್ನು ಹೇಳಬೇಕು ಅಂತ ಇದ್ದೆ."

"ಏತಕ್ಕೆ?"

"ಏಕೆ ಅಂದರೆ ನನಗೆ ವಿಜ್ಞಾನದಲ್ಲಿ ಬಹಳ ಆಸಕ್ತಿ. ನಾನು ವಾಸಿಸುವುದು ಒಂದು ವಿಶ್ವವಿದ್ಯಾನಿಲಯದ ಚಾವಣಿಯ ಮೇಲೆ. ವಿಜ್ಞಾನದ ಪ್ರೊಫೆಸರ ಉಪನ್ಯಾಸ ನನ್ನ ಕಿವಿಗೆ ಬೀಳುತ್ತದೆ. ಅದರಿಂದ ನನಗೆ ವಿಜ್ಞಾನ ಬಹಳ ಪ್ರಿಯವಾಗಿದೆ. ಅದರಿಂದಲೇ ನನಗೆ ಸಮುದ್ರದ ವಿಷಯ, ಅಲ್ಲಿ ಏನು ನಡೆಯುತ್ತದೆ ಎನ್ನುವುದು ಎಲ್ಲವನ್ನೂ ಕೇಳಲು ಆಸೆ. ಅಲ್ಲಿ ಪಾರಿವಾಳಗಳ ಮತ್ತು ಗುಬ್ಬಚ್ಚಿಗಳ ಮೊಟ್ಟೆಗಳನ್ನೂ ನೋಡಬಹುದೆ?"

"ಏನು ಅವಿವೇಕದ ಮಾತು!" ಸಿಂಪಿ ಹೇಳಿತು. "ಸಮುದ್ರದಲ್ಲಿ ಪಾರಿವಾಳಗಳು ಮತ್ತು ಗುಬ್ಬಚ್ಚಿಗಳು ಇರುತ್ತವೆಯೇ!"

"ನನಗೆ ನಿನ್ನಿಂದ ತಿಳಿಯಬೇಕಾಗಿದ್ದದ್ದು ಅದೇ."

"ಇಂತಹ ದಡ್ಡ ಪ್ರಶ್ನೆಗಳನ್ನು ಕೇಳಬೇಡ," ಸಿಂಪಿ ಎಂದಿತು. "ಸಮುದ್ರದಲ್ಲಿ ಲಕ್ಷಾಂತರ ಚಿಪ್ಪುಗಳಿವೆ - ನನ್ನ ಚಿಪ್ಪಿನ ಹಾಗೆ. ಆದರೆ ಅವುಗಳಲ್ಲೆಲ್ಲ ನಾನೇ ಬಹು ಶ್ರೇಷ್ಠ. ಆದ್ದರಿಂದ ನಾನು ಇತರ ಚಿಪ್ಪುಗಳ ಜೊತೆಗೆ ಮಾತೇ ಆಡುವುದಿಲ್ಲ. ಸಾವಿರಾರು ಬಗೆಗಳ ಬಣ್ಣಬಣ್ಣದ ಮೀನುಗಳು, ಸಾವಿರಾರು ಬೇರೆಬೇರೆ ಸಸ್ಯಗಳು ಇವೆ, ಅಷ್ಟೆ. ಅಲ್ಲಿ ಸಮುದ್ರದ ತಳದಲ್ಲಿ ನಿನ್ನಂತಹ ಪೆದ್ದ ಪ್ರಾಣಿಗಳು ಯಾವುವೂ ಇಲ್ಲ."

ಕಾಗೆ ನಕ್ಕು ಬಿಟ್ಟಿತು. "ನೀನು ನನ್ನನ್ನು ಪೆದ್ದ ಅಂದರೆ ನನಗೆ ಚಿಂತೆ ಇಲ್ಲ, ಆದರೆ ವಾಸ್ತವವಾಗಿ ನಾನು ಪೆದ್ದನಲ್ಲ, ನಾನೊಂದು ಕಾಗೆ - ಅದರಲ್ಲೂ ಜಾಣ ಕಾಗೆ. ಆದರೆ, ನನ್ನ ಹಳೆಯ ಗೆಳೆಯ, ನೀನು ನಿನ್ನ ಚಿಕ್ಕ ಗವಿಯೊಳಗಿಂದಲೇ ಮಾತನಾಡುತ್ತಿ. ನೀನೇಕೆ ಹೊರಗೆ ಬರುವುದಿಲ್ಲ?"

"ನಿನಗೆ ಸಭ್ಯನಡತೆಯೇ ತಿಳಿಯದೆ? ಇಷ್ಟು ಸದರದಿಂದ ಮಾತನಾಡುವ ಧೈರ್ಯವೆ ನಿನಗೆ? ನಾನು ನಿನ್ನ ಗೆಳೆಯನೇನೂ ಅಲ್ಲ."

"ನೀನೇ ಸಮುದ್ರ ರಾಜ ಎನ್ನುವ ಹಾಗೆ ಮಾತನಾಡುತ್ತೀಯೆ!"

"ಹೌದು - ಸಮುದ್ರಕ್ಕೆ ಖ್ಯಾತಿ ತರುವ ಮುತ್ತನ್ನು ನಾನೇ ಮಾಡುವುದು. ಇದೆಲ್ಲ ನನ್ನಿಂದಲೇ," ಸಿಂಪಿ ಹೇಳಿತು.

ಒಳಗೊಳಗೇ ನಗುತ್ತ ಕಾಗೆಯು "ಹಾಗಿದ್ದರೆ, ನಾನು ನಿನ್ನನ್ನು ಒಮ್ಮೆ ನೋಡಲೇಬೇಕು, ಏಕೆಂದರೆ ಇಂತಹ ಆಶ್ಚರ್ಯಕರ ವಸ್ತುವನ್ನು ನಾನು ಈವರೆಗೆ ನೋಡಿಯೇ ಇಲ್ಲ," ಎಂದಿತು.

"ನಾನು ವಸ್ತುವಲ್ಲ - ಮುತ್ತುಗಳನ್ನು ಮಾಡುವ ಸಿಂಪಿ ನಾನು."

"ಆಗಲಿ, ಆಗಲಿ. ಆದರೆ, ಮಹಾಸಾಮ್ರಾಟರೇ" ಉಲ್ಲಾಸದಿಂದಲೇ ಕಾಗೆ ಎಂದಿತು, "ತಾವು ಹೊರಕ್ಕೆ ದಯಮಾಡಿಸಿ ತಮ್ಮನ್ನು ಒಮ್ಮೆ ನೋಡುವ ಭಾಗ್ಯವನ್ನು ನನಗೆ ಅನುಗ್ರಹಿಸುವಿರಾ?"

"ಉಹುಂ, ಉಹುಂ, ಉಹುಂ, ಉಹುಂ. ನಾನು ಬಾಗಿಲನ್ನು ತೆರೆಯಲಾರೆ. ನನಗೀಗ ಬಿಡುವಿಲ್ಲದಷ್ಟು ಕೆಲಸ."

"ನಿನ್ನ ಮುತ್ತನ್ನು ನೀನು ಆಮೇಲೆ ಮಾಡಬಹುದು. ಬಾಗಿಲು ತೆರೆ, ಅಷ್ಟೆ - ನಿನ್ನಂತೆ ಗಣ್ಯರಾದ ಒಬ್ಬರನ್ನು, ಮುತ್ತನ್ನು ಮಾಡಬಲ್ಲವರನ್ನು ನೋಡಲು ಬಯಸುವ ಬಡಪಾಯಿ ಕಾಗೆ ನಾನು. ನನಗೆ ಮುತ್ತನ್ನೂ ನೋಡುವ ಬಯಕೆ. ನಾನು ನನ್ನ ಜೀವಮಾನದಲ್ಲೆ ಈವರೆಗೆ ಒಂದು ಮುತ್ತನ್ನು ಕಂಡಿಲ್ಲ ನೋಡು."

"ನಾನು ಬಾಗಿಲನ್ನು ತೆರೆಯುವುದಿಲ್ಲ ಅಂತ ಈಗತಾನೆ ಹೇಳಿದ್ದೇನೆ. ನೀನು ಅಷ್ಟು ಜಾಣ ಅಂದುಕೊಂಡಿದ್ದರೆ, ನೀನೇ ಬಾಗಿಲನ್ನು ತೆರೆಯಬಹುದಲ್ಲ!"

ಕಾಗೆ ತನ್ನ ಚಿಪ್ಪಿನ ಮುಚ್ಚಳವನ್ನು ಖಂಡಿತ ತೆರೆಯಲಾರದು ಎಂದು ಸಿಂಪಿಗೆ ಖಂಡಿತವಾಗಿತ್ತು. ಅದರಿಂದಲೇ ಹೀಗೆ ಮೂದಲಿಸಿತು.

ಆದರೆ ಈಗ ಕಾಗೆಗೆ ಸಿಟ್ಟು ಬಂದಿತ್ತು.

"ನಿನಗೆ ಅದೇ ಬೇಕಾದರೆ ಸರಿ, ಹಾಗೆಯೇ ಆಗಬಹುದು," ಕಾಗೆ ಹೇಳಿತು. "ತೋರಿಸುತ್ತೇನೆ ನಿನಗೆ. ಈಗ ಆಗುವುದು ನಿನಗೆ ಇಷ್ಟವಾಗದೆ ಹೋದರೆ ನನ್ನನ್ನು ಆಕ್ಷೇಪಿಸಬೇಡ ಅಷ್ಟೆ!"

ಕಾಗೆಯು ಚಿಪ್ಪನ್ನು ತನ್ನ ಕೊಕ್ಕಿನಲ್ಲಿ ಎತ್ತಿಕೊಂಡು ಹಾರಿಬಿಟ್ಟಿತು - ಎತ್ತರವಾಗಿ, ಎತ್ತರೆತ್ತರವಾಗಿ ಹಾರಿತು. ಬಂಡೆಯೊಂದರ ಅಂಚನ್ನು ಅದು ತಲಪಿತು. ಬಹು ಎತ್ತರದಿಂದ ಅದು ಚಿಪ್ಪನ್ನು ನೇರವಾಗಿ ಬಂಡೆಯ ಮೇಲಕ್ಕೆ ಬೀಳಿಸಿತು. ಚಿಪ್ಪು ಲಕ್ಷ ಚೂರುಗಳಾಯಿತು. ಕಾಗೆ ಅದನ್ನೆ ಹಿಂಬಾಲಿಸಿ ವೇಗವಾಗಿ ಹಾರಿ ಬಂತು. ಅದು ಸಿಂಪಿಯನ್ನು ತನ್ನ ಕೊಕ್ಕಿನಲ್ಲಿ ಬಿಗಿಯಾಗಿ ಹಿಡಿಯಿತು. ಒಂದೇ ಬಾರಿಗೆ ಅದನ್ನು ನುಂಗಿಬಿಟ್ಟಿತು.

ಮುತ್ತು ಕಾಗೆಯಿಂದ ದೂರದೂರವಾಗಿ ಉರುಳುತ್ತಿದ್ದಂತೆ ಕಾಗೆಯು ಅದನ್ನು ನೋಡಿತು. ಬೆಲೆ ಕಟ್ಟಲಾಗದ ಮುತ್ತು ಸಗಣಿ ಮುದ್ದೆಯೊಂದರಲ್ಲಿ ಬಿದ್ದುದನ್ನೆ ನೋಡಿತು. ಅನಂತರ ಮತ್ತೆ ಗಾಳಿಯಲ್ಲಿ ಮೇಲಕ್ಕೇರಿತು. ಖುಷಿಯಾಗಿ 'ಕಾ, ಕಾ' ಎನ್ನುತ್ತ ಹಾರಿಹೋಯಿತು.

